ಸಂಸ್ಕೃತಸಂವರ್ಧಿನೀಸಭಾಗ್ರಂಥಮಾಲಾ ಕುಸುಮ—೮

ಧನಂಜಯವಿರಚಿತಂ

# ದಶರೂಪಕಂ

ಮೂಲಶ್ಲೋಕಗಳ ಅನುವಾದ, ಧನಿಕಕೃತಾವಲೋಕಸಾರಸಹಿತ

ಅನುವಾದಕ

**ವಿದ್ವಾನ್ ಆಚಾರ್ಯ ಎಸ್. ವಿ. ಭೀಮಭಟ್ಟ ಬಿ.ಎ.**

ತರ್ಕಶಾಸ್ತ್ರಪ್ರಾಧ್ಯಾಪಕ

ಸರ್ಕಾರದ ಸಂಸ್ಕೃತಮಹಾಪಾಠಶಾಲಾ, ಬೆಂಗಳೂರು.

**ಸಂಸ್ಕೃತಸಂವರ್ಧಿನೀ ಸಭಾ ಪ್ರಕಾಶನ.**

ಪ್ರಥಮಮುದ್ರಣ

1974



[ಬೆಲೆ 2-50

ಸಂಸ್ಕೃತಸಂವರ್ಧಿನೀಸಭಾಗ್ರಂಥಮಾಲಾ ಕುಸುಮ—೮

ಧನಂಜಯವಿರಚಿತಂ

# ದಶರೂಪಕಂ

ಮೂಲಶ್ಲೋಕಗಳ ಅನುವಾದ, ಧನಿಕಕೃತಾವಲೋಕಸಾರಸಹಿತ

ಅನುವಾದಕ

**ವಿದ್ವಾನ್ ಆಚಾರ್ಯ ಎಸ್. ವಿ. ಭೀಮಭಟ್ಟ ಬಿ.ಎ.**

ತರ್ಕಶಾಸ್ತ್ರಪ್ರಾಧ್ಯಾಪಕ

ಸರ್ಕಾರದ ಸಂಸ್ಕೃತಮಹಾಪಾಠಶಾಲಾ, ಬೆಂಗಳೂರು.

**ಸಂಸ್ಕೃತಸಂವರ್ಧಿನೀ ಸಭಾ ಪ್ರಕಾಶನ.**

ಪ್ರಥಮಮುದ್ರಣ

1974

 [ಬೆಲೆ 2-50

ಸಂಸ್ಕೃತಸಂವರ್ಧಿನೀಸಭಾಗ್ರಂಥಮಾಲಾ ಕುಸುಮ—೮

ಸಂಸ್ಕೃತಸಂವರ್ಧಿನೀ ಸಭಾಪ್ರಕಾಶನ

ಪ್ರಥಮಮುದ್ರಣ ೧,೦೦೦ ಪ್ರತಿಗಳು

ಬೆಲೆ 2–50

ಮುದ್ರಕರು
ಶ್ರೀ ಮಲ್ಲಿಕಾರ್ಜುನ ಮುದ್ರಣಾಲಯ
೧೯೫, ಪೋಲೀಸ್ ರಸ್ತೆ (ರಾಣಾಸಿಂಗ್ ಪೇಟೆ)
ಬೆಂಗಳೂರು—೨

# ಎರಡು ಮಾತುಗಳು

ಧನಂಜಯಕೃತವಾದ 'ದಶರೂಪಕ'ವು ನಾಟ್ಯಶಾಸ್ತ್ರದಲ್ಲಿ ಒಂದು ಮಹತ್ತ್ವಪೂರ್ಣವಾದ ಗ್ರಂಥ. ಭರತಮುನಿಕೃತವಾದ ನಾಟ್ಯಶಾಸ್ತ್ರದ ಸಂಕ್ಷಿಪ್ತ, ಆದರೂ ಸರ್ವಾಂಗೀಣವಾದ ವಿವೇಚನೆಯನ್ನು ಒಳಗೊಂಡಿರುವ ಗ್ರಂಥವಿದು. ಈ ಗ್ರಂಥದ ಅನಂತರ ಬಂದಿರುವ ಪ್ರತಾಪರುದ್ರೀಯ, ಏಕಾವಲೀ, ಸಾಹಿತ್ಯದರ್ಪಣ, ನಾಟ್ಯದರ್ಪಣ, ರಸಮಂಜರೀ ಎಂಬ ಗ್ರಂಥಗಳಿಗೆ ದಶರೂಪಕವು ಉಪಜೀವ್ಯ (ಆಶ್ರಯ) ವಾಗಿದೆ. ಈ ಗ್ರಂಥದ ಅನುವಾದ ಇಂಗ್ಲೀಷ್, ಹಿಂದಿ, ಕನ್ನಡಗಳಲ್ಲಿ ಆಗಿದೆ. ಆದರೂ ನಾಟ್ಯಕ್ಕೆ ಸಂಬಂಧಪಟ್ಟ ಈ ಗ್ರಂಥದ ಒಂದು ಮತ್ತು ಮೂರನೆಯ ಪ್ರಕಾಶವನ್ನು ಮೂಲ ಮತ್ತು ಧನಿಕಕೃತವಾದ ಅವಲೋಕದ ಅನುವಾದಸಹಿತವಾಗಿ ಸಾರರೂಪದಿಂದ ಕೊಡುವುದಕ್ಕಾಗಿ ಈ ಅನುವಾದಗ್ರಂಥವು ಹೊರಟಿದೆ.

**ಪರಿಚಯ**—ದಶರೂಪಕ ಅಥವಾ 'ದಶರೂಪ'ಕಾರನಾದ ಧನಂಜಯನು ಧಾರಾನಗರಿಯಲ್ಲಿದ್ದ ಭೋಜರಾಜನ ಚಿಕ್ಕಪ್ಪನಾದ ಮುಂಜರಾಜನ ಆಸ್ಥಾನದಲ್ಲಿದ್ದನು. ಇವನ ಕಾಲ ಕ್ರಿ.ಶ. ೧೦ನೆಯ ಶತಮಾನ. ಈ ಗ್ರಂಥದಲ್ಲಿ ಒಟ್ಟು 300 ಕಾರಿಕೆಗಳಿವೆ. ಮುಂಜನ ಕಾಲಾನಂತರ ಧನಂಜಯನ ಸೋದರನಾದ ಧನಿಕನು ದಶರೂಪಕಕ್ಕೆ 'ಅವಲೋಕ' ಎಂಬ ವ್ಯಾಖ್ಯಾನವನ್ನು ಬರೆದನು. ಈ ಗ್ರಂಥವೂ ಇದರ ವ್ಯಾಖ್ಯಾನವೂ ಸಂಗ್ರಹವಾಗಿಯೂ ಉಪಯುಕ್ತವಾಗಿಯೂ ಇವೆ. ಇದರಿಂದ ಭರತನ ನಾಟ್ಯಶಾಸ್ತ್ರವೂ ಸ್ವಲ್ಪ ಹಿಂದೆ ಬೀಳುವಂತಾಯಿತು. ಇಲ್ಲಿರುವ ಉದಾಹರಣೆಗಳು ಸ್ವರಚಿತವಲ್ಲ. ಪ್ರಸಿದ್ಧವಾದ ನಾಟಕಗಳಿಂದ ಆರಿಸಿಕೊಂಡವು. ಅವುಗಳಲ್ಲಿಯೂ ವೇಣೀಸಂಹಾರ ಮತ್ತು ರತ್ನಾವಳಿಯ ಉದಾಹರಣೆಗಳೇ ಹೆಚ್ಚು. ಈ ಗ್ರಂಥವು ಮುಖ್ಯವಾಗಿ ನಾಟ್ಯ–ನಾಟಕಾದಿಗಳನ್ನು ನಿರೂಪಿಸಲು ಹೊರಟಿದ್ದರೂ ಕಾವ್ಯಲಕ್ಷಣ, ನಾಯಕ–ನಾಯಿಕಾಪ್ರಭೇದ, ರಸನಿರೂಪಣೆಗಳೂ ಆನುಷಂಗಿಕವಾಗಿ ಬಂದಿವೆ. ಆದರೂ ರಸಪ್ರಧಾನವಾದ ನಾಟ್ಯನಿರೂಪಣವನ್ನು ಮಾಡಲು ಹೊರಟಿರುವ ಈ ಗ್ರಂಥದಲ್ಲಿ 'ರಸ'ತತ್ತ್ವ ನಿರೂಪಣೆಗೆ ಹೆಚ್ಚು ಪ್ರಾಧಾನ್ಯ ಕೊಟ್ಟಿರುವುದು ಯುಕ್ತವೇ

ಆಗಿದೆ. ಇವನು ಶಾಂತವನ್ನು ಒಂಭತ್ತನೆಯ ರಸವೆಂದು ಒಪ್ಪುವುದಿಲ್ಲ. ಆ ವಿಷಯದಲ್ಲಿ ಕಟುವಾದ ಖಂಡನೆಯನ್ನು ಬರೆದಿದ್ದಾನೆ.

ದಶರೂಪಕದ ನಾಟಕಾದಿರೂಪಕಗಳಿಗೆ ಸಂಬಂಧಪಟ್ಟ ಭಾಗದ ಸಾರ–ವನ್ನು ತಿಳಿಯಬೇಕೆಂಬ ಅಪೇಕ್ಷೆಯುಳ್ಳವರಿಗಾಗಿ ಈ ಅನುವಾದಗ್ರಂಥವು ಬರೆಯಲ್ಪಟ್ಟಿದೆ. ಸಂಸ್ಕೃತಸಾಹಿತ್ಯಪರೀಕ್ಷೆಯ ವಿದ್ಯಾರ್ಥಿಗಳಿಗೂ, ಸಂಸ್ಕೃತ M.A., B.A. ಮುಂತಾದ ಪರೀಕ್ಷೆಯಲ್ಲಿ ನಾಟ್ಯಶಾಸ್ತ್ರಸಾರವನ್ನು ತಿಳಿಯಲು ಅಪೇಕ್ಷಿಸುವ ವಿದ್ಯಾರ್ಥಿಗಳಿಗೂ ಈ ಗ್ರಂಥವು ಹೆಚ್ಚು ಸಹಾಯಕವೆಂದು ಭಾವಿಸಲಾಗಿದೆ. ಮೊದಲನೆಯ ಪ್ರಕಾಶದಲ್ಲಿ ದಶರೂಪಕದಲ್ಲಿ ಇಲ್ಲದಿರುವ ಕೆಲವು ಸಂಧಿಸಮನ್ವಯವನ್ನು ವೇಣೀಸಂಹಾರನಾಟಕದಿಂದ ಆರಿಸಿಕೊಡಲಾಗಿದೆ. ಎರಡನೆಯ ಪ್ರಕಾಶದಲ್ಲಿ, ಉದಾಹರಣಶ್ಲೋಕ ಮತ್ತು ಅವುಗಳ ಪೂರ್ತಿ ಅನುವಾದವನ್ನು ಕೊಟ್ಟರೆ ಗ್ರಂಥವು ಬೆಳೆಯುತ್ತದೆಂದು ಶ್ಲೋಕ ಮತ್ತು ವಾಕ್ಯ–ಗಳ ಆದ್ಯಂತವನ್ನು ಕೊಟ್ಟು, ಅಂಕ ಮತ್ತು ಶ್ಲೋಕಗಳ ಸಂಖ್ಯೆಯನ್ನು ಸೂಚಿಸಲಾಗಿದೆ. ಮೂರನೆಯ ಪ್ರಕಾಶದಲ್ಲಿ ಧನಿಕನ ಅವಲೋಕ ವ್ಯಾಖ್ಯೆಯ ಪೂರ್ಣ ಅನುವಾದ ಬಂದಿದೆ. 'ಅವಲೋಕ'ದಲ್ಲಿ ರತ್ನಾವಳಿಯ ಉದಾಹರಣೆಗಳನ್ನು ಕೊಟ್ಟಿದ್ದರೂ ಎರಡೆರಡು ಉದಾಹರಣೆಗಳು ಅನಾವಶ್ಯಕವೆಂದು ಮೊದಲನೆಯ ಪ್ರಕಾಶದಲ್ಲಿ ಅದನ್ನು ಕೈಬಿಡಲಾಗಿದೆ. ಪರಿಶಿಷ್ಟದಲ್ಲಿ ೨, ೪ ಪ್ರಕಾಶಗಳ ಸಾರವನ್ನು ಕೆಲವು ಮುಖ್ಯ ನಾಟಕಗಳ ಸ್ವಲ್ಪಮಟ್ಟಿನ ಪರಿಚಯ ಮುಂತಾದ್ದನ್ನು ಕೊಡಲಾಗಿದೆ.

ಈ ಗ್ರಂಥವನ್ನು ಸಿದ್ಧಪಡಿಸುವಾಗ ಅನೇಕರಿಂದ ನೆರವು ದೊರತಿದೆ. ಅದಕ್ಕಾಗಿ ಅವರಿಗೆ ಅಭಿನಂದನೆಗಳು. ಸಂಸ್ಕೃತಸಂವರ್ಧಿನೀಸಭೆಯ ಈ ಪ್ರಕಾಶನಗಳನ್ನು ಪ್ರೋತ್ಸಾಹಿಸಿ ಸಂಸ್ಕೃತ ಪ್ರಚಾರಕ್ಕೆ ಎಲ್ಲರೂ ನೆರವಾಗಬೇಕೆಂದು ವಿಜ್ಞಾಪಿಸುವ.

ಆನಂದ ಸಂ। ಆಶ್ವಿನ ಶು. ೧. ಇತಿ ಸಜ್ಜನವಿಧೇಯ

16–10–74 ಎಸ್. ವಿ. ಭೀಮಭಟ್ಟ

ಧನಂಜಯವಿರಚಿತಂ

# ದಶರೂಪಕಂ

## ಪ್ರಥಮಃ ಪ್ರಕಾಶಃ

## ಮಂಗಲಾಚರಣೆ

**೧ ಗಣೇಶ ಸ್ತುತಿ—**

**ನಮಸ್ತಸ್ಮೈಗಣೇಶಾಯ ಯತ್ಕಂಠಃ ಪುಷ್ಕರಾಯತೇ ।**
**ಮದಾಭೋಗಘನಧ್ವಾನೋ ನೀಲಕಂಠಸ್ಯತಾಂಡವೇ ॥ ೧ ॥**

**ಅವತರಣಿಕಾ**—ಶಿಷ್ಟಸಂಪ್ರದಾಯದಂತೆ, ಗ್ರಂಥ ರಚನೆಯಲ್ಲಿ ಬರುವ ವಿಘ್ನಗಳ ನಿವಾರಣೆಗೆಂದು ಮೊದಲಿನ ಎರಡು ಶ್ಲೋಕಗಳಲ್ಲಿ ಗ್ರಂಥಕಾರನಾದ ಧನಂಜಯನು ಇಷ್ಟದೇವತಾ ಸ್ತುತಿರೂಪವಾದ ಮಂಗಳವನ್ನು ಮಾಡಿದ್ದಾನೆ.

**ಅನ್ವಯಾರ್ಥ**—ನೀಲಕಂಠಸ್ಯ=ವಿಷವನ್ನು ಕಂಠದಲ್ಲಿ ಧರಿಸಿದ್ದರಿಂದ ಕಪ್ಪಾದ ಕಂಠವುಳ್ಳ ಈಶ್ವರನ, ತಾಂಡವೇ=ತಾಂಡವವೆಂಬ ಉದ್ಧತನೃತ್ಯದಲ್ಲಿ, ಮದಾಭೋಗಘನಧ್ವಾನಃ = ಮದದ ಪರಿಪೂರ್ಣತೆಯಿಂದ ಗಂಭೀರವಾದ ಧ್ವನಿಯುಳ್ಳ, ಯತ್ಕಂಠಃ=ಯಾವ ಗಣೇಶನ ಕಂಠವು, ಪುಷ್ಕರಾಯತೇ= ಮೃದಂಗದಂತೆ ಆಚರಿಸುತ್ತಿದೆಯೋ (ಧ್ವನಿಗೈಯುತ್ತಿದೆಯೋ) ತಸ್ಮೈ= ಅಂತಹ, ಗಣೇಶಾಯ=ಗಣೇಶನಿಗೆ, ನಮಃ=ನಮಸ್ಕಾರ.

**ತಾತ್ಪರ್ಯ–ವಿಶೇಷಾಂಶ**—ಈಶ್ವರನು ಮಾಡುವ ತಾಂಡವವೆಂಬ ಉದ್ಧತನೃತ್ಯದಲ್ಲಿ ಗಂಭೀರವಾದ ನಿನಾದದಿಂದ ಗಣೇಶನು ಮೃದಂಗದಂತೆ ಧ್ವನಿ ಮಾಡುತ್ತಿದ್ದಾನೆ. ಅಂತಹ ಗಣೇಶನನ್ನು ಗ್ರಂಥಕಾರನು ನಮಸ್ಕರಿಸಿದ್ದಾನೆ. ನೀಲಕಂಠ ಎಂದರೆ ನವಿಲು, ಘನಧ್ವಾನ ಎಂದರೆ ಮೋಡದ ಗರ್ಜನೆ

ಎಂದೂ ಅರ್ಥವುಂಟು. ಮೋಡದ ಗುಡುಗನ್ನು ಕೇಳಿದಾಗ ನವಿಲು ಕುಣಿಯು ತ್ತದೆ ಎಂದು ಕವಿಸಮಯವಿದೆ. ಮೇಘ ಧ್ವನಿಯನ್ನು ಕೇಳಿ ಮಯೂರವು ತಾಂಡವ ನೃತ್ಯವನ್ನು ಮಾಡುವಂತೆ ಎಂದು ಉತ್ತರಾರ್ಧದಲ್ಲಿ ಖಂಡಶ್ಲೇಷದಿಂದ ಉಪಮೆಯಚ್ಛಾಯೆಯು ತೋರುತ್ತದೆ.

೨ ವಿಷ್ಣು ಮತ್ತು ಭರತರ ಸ್ತುತಿ—

**ದಶರೂಪಾನುಕಾರೇಣ ಯಸ್ಯ ಮಾದ್ಯಂತಿ ಭಾವುಕಾಃ ।**
**ನಮಃ ಸರ್ವವಿದೇ ತಸ್ಮೈ ವಿಷ್ಣವೇ ಭರತಾಯಚ ॥ ೨ ॥**

ಅನ್ವ—ಯಸ್ಯ = ಯಾವ ವಿಷ್ಣುವಿನ, ದಶರೂಪಾನುಕಾರೇಣ = ಹತ್ತು ರೂಪಗಳ ಕಥಾ ಶ್ರವಣ, ಧ್ಯಾನ ಮುಂತಾದ್ದರಿಂದ, ಭಾವುಕಾಃ = ಭಕ್ತರು, ಮಾದ್ಯಂತಿ = ಸಂತೋಷ ಪಡುತ್ತಾರೋ, ಸರ್ವವಿದೇ = ಸರ್ವಜ್ಞನಾದ, ತಸ್ಮೈ = ಅಂತಹ, ವಿಷ್ಣವೇ = ವಿಷ್ಣುವಿಗೂ, ಯಸ್ಯ = ಯಾವ ಭರತ ಮುನಿಯ, ದಶರೂಪಾನುಕಾರೇಣ = ನಾಟಕ ಪ್ರಕರಣ ಮೊದಲಾದ ಹತ್ತು ರೂಪಕಗಳ ಅನುಕರಣೆಯಿಂದ, ಭಾವುಕಾಃ = ರಸಿಕರು, ಮಾದ್ಯಂತಿ = ಸಂತೋಷ ಪಡುತ್ತಾರೋ, ಸರ್ವವಿದೇ = ಸರ್ವಜ್ಞನಾದ, ತಸ್ಮೈ = ಅಂತಹ, ಭರತಾಯಚ = ಭರತ ಮುನಿಗೂ, ನಮಃ = ನಮಸ್ಕಾರವು.

**ತಾತ್ಪರ್ಯ**—ವಿಷ್ಣುವಿನ ಮತ್ಸ್ಯಕೂರ್ಮಾದಿ ದಶಾವತಾರಗಳನ್ನು ಧ್ಯಾನ ಮಾಡಿ ಭಕ್ತರು ಆನಂದ ಪಡುವಂತೆ, ಭರತ ಮುನಿಯ ನಾಟಕಾದಿ ದಶರೂಪಕಗಳನ್ನು ಪ್ರಯೋಗಿಸಿ ನೋಡಿ ರಸಿಕರು ಆನಂದ ಪಡುತ್ತಾರೆ. ಹೀಗೆ ಭಕ್ತ ಮತ್ತು ರಸಿಕರಿಗೆ ಆನಂದವನ್ನುಂಟು ಮಾಡಿರುವ ವಿಷ್ಣು ಮತ್ತು ಭರತರಿಬ್ಬರಿಗೂ ಕವಿಯು ನಮಸ್ಕಾರವನ್ನು ಮಾಡಿದ್ದಾನೆ. (ದಶರೂಪಕ = ನಾಟಕಾದಿ ಹತ್ತು ರೂಪಕಗಳನ್ನು ವಿವರಿಸುವ ಗ್ರಂಥ)

(ಈಗ ರೂಪಕ ಎಂಬುದಕ್ಕೆ ಬದಲಾಗಿ ನಾಟಕ ಶಬ್ದವನ್ನೇ ಹೆಚ್ಚಾಗಿ ಬಳಸಲಾಗುತ್ತಿದೆ. ವಾಸ್ತವವಾಗಿ ನಾಟಕವು ರೂಪಕಗಳಲ್ಲಿನ ಒಂದು ಪ್ರಭೇದವು ಮಾತ್ರ)

# ಗ್ರಂಥದ ಉಪೋದ್ಘಾತ

೧ ಶ್ರೋತೃ ಪ್ರವರ್ತನ–

**ಕಸ್ಯಚಿದೇವ ಕದಾಚಿದ್ದಯಯಾ ವಿಷಯಂ ಸರಸ್ವತೀ**
**ವಿದುಷಃ ।**
**ಘಟಯತಿ ಕಮಪಿತಮನ್ಯೋ ವ್ರಜತಿ ಜನೋಯೇನ**
**ವೈದಗ್ಧೀಂ ॥ ೧ ॥**

**ಅನುವಾದ**—ಯಾವನಾದರೂ ಒಬ್ಬ ವಿದ್ವಾಂಸನಿಗೆ ಯಾವಾಗಲಾದರೊಮ್ಮೆ ಯಾವುದಾದರೊಂದು ವಿಷಯವನ್ನು ಸರಸ್ವತಿಯು ಕೃಪೆಯಿಂದ ಹೊಂದಿಸುತ್ತಾಳೆ. ಆ ವಿಷಯದ ಪರಿಜ್ಞಾನದಿಂದ ಮತ್ತೊಬ್ಬನು ಪಾಂಡಿತ್ಯವನ್ನು ಪಡೆಯುತ್ತಾನೆ.

**ತಾತ್ಪರ್ಯ**—ಸರಸ್ವತಿಯು ಯಾವಾಗಲಾದರೊಮ್ಮೆ ಯಾವನಾದರೊಬ್ಬ ಕವಿಗೆ ಯಾವುದಾದರೊಂದು ಗ್ರಂಥದ ರಚನೆಯ ಶಕ್ತಿಯನ್ನು ಕೊಟ್ಟಿರುತ್ತಾಳೆ. ಅಂತಹ ಗ್ರಂಥವನ್ನು ಓದಿ ಇತರರೂ ಪಂಡಿತರಾಗುತ್ತಾರೆ.

೪ ಗ್ರಂಥಕಾರನ ನಿವೇದನ

**ಉದ್ಧೃತ್ಯೋದ್ಧೃತ್ಯಸಾರಂ ಯಮಖಿಲನಿಗಮಾನ್ನಾಟ್ಯ**
**ವೇದಂ ವಿರಿಂಚಿಃ**
**ಚಕ್ರೇಯಸ್ಯಪ್ರಯೋಗಂ ಮುನಿರಪಿ ಭರತಃ ತಾಂಡವಂ**
**ನೀಲಕಂಠಃ ।**
**ಶರ್ವಾಣೀಲಾಸ್ಯಮಸ್ಯ ಪ್ರತಿಪದಮಪರಂ ಲಕ್ಷ್ಮಕೇಃ**
**ಕರ್ತುಮಿಷ್ಟೇ**
**ನಾಟ್ಯಾನಾಂ ಕಿಂತು ಕಿಂಚಿತ್ ಪ್ರಗುಣರಚನಯಾ**
**ಲಕ್ಷಣಂ ಸಂಕ್ಷಿಪಾಮಿ ॥ ೪ ॥**

**ಅನು**—ಎಲ್ಲ ವೇದಗಳ ಸಾರವನ್ನು ಎತ್ತಿ ಎತ್ತಿ ಬ್ರಹ್ಮನು ನಾಟ್ಯ ವೇದ

ವನ್ನು ವಿರಚಿಸಿದನು. ಅದನ್ನು ಭರತಮುನಿಯು ಕರಣ ಅಂಗಹಾರಗಳ ಮೂಲಕ ಪ್ರಯೋಗಿಸಿದನು. ನೀಲಕಂಠನು ನಾಟ್ಯವೇದಾನುಸಾರಿಯಾದ ತಾಂಡವವನ್ನೂ, ಪಾರ್ವತಿಯು ಲಾಸ್ಯವನ್ನೂ ಮಾಡಿತೋರಿಸಿದರು. ಇಂತಹ ನಾಟ್ಯವೇದಕ್ಕೆ ಪ್ರತಿಪದ ಪೂರ್ವಕವಾಗಿ ಮತ್ತೆ ಲಕ್ಷಣವನ್ನು ರಚಿಸಲು ಯಾರು ಸಮರ್ಥರಾದಾರು ? ಆದ್ದರಿಂದ ಕೆಲವು ಉತ್ತಮ ಗುಣಗಳನ್ನು ಉದ್ಧರಿಸಿ ಲಕ್ಷಣ ವನ್ನು ಸಂಕ್ಷೇಪವಾಗಿ ಹೇಳುತ್ತೇನೆ.

**ವಿಶೇಷಾಂಶ**—ಹಸ್ತಪಾದಗಳ ವಿನ್ಯಾಸದ ರೀತಿಯೇ ಕರಣ. ಅದರ ಸಂಖ್ಯೆ ೧೦೮. ಅಂಗಗಳ ವಿಕ್ಷೇಪವು ಅಂಗಹಾರ. ಅದರ ಸಂಖ್ಯೆ ೩೩.

**೫ ಸಂಕ್ಷೇಪ ಕಾರಣ—**

**ವ್ಯಾಕೀರ್ಣೇ ಮಂದ ಬುದ್ಧೀನಾಂ ಜಾಯತೇ**
**ಮತಿವಿಭ್ರಮಃ ।**
**ತಸ್ಯಾರ್ಥಸ್ತತ್ಪದೈಸ್ತೇನ ಸಂಕ್ಷಿಪ್ಯ ಕ್ರಿಯತೇಽಂಜಸಾ ॥ ೫ ॥**

**ಅನು**—ತೊಡಕಾಗಿರುವ ನಾಟ್ಯ ಶಾಸ್ತ್ರದಲ್ಲಿ ಮಂದ ಬುದ್ಧಿಯವರಿಗೆ ಗಲಿಬಿಲಿ ಉಂಟಾಗುತ್ತದೆ. ಆದುದರಿಂದ ನಾಟ್ಯಶಾಸ್ತ್ರದಲ್ಲಿ ಲಕ್ಷಣಾದಿ ಅರ್ಥ ಗಳನ್ನು ನಾಟ್ಯಶಾಸ್ತ್ರದ ಪದಗಳಿಂದಲೇ ಸಂಕ್ಷೇಪವಾಗಿಯೂ, ನೇರವಾಗಿಯೂ ಹೇಳಲಾಗಿದೆ.

**೬ ದಶರೂಪಕಗಳ ಫಲವೇನು ?**

**ಆನಂದನಿಸ್ಯಂದಿಷುರೂಪಕೇಷು ವ್ಯುತ್ಪತ್ತಿಮಾತ್ರಂ**
**ಫಲಮಲ್ಪಬುದ್ಧಿಃ ।**
**ಯೋಽಪೀತಿಹಾಸಾದಿವದಾಹ ಸಾಧುಸ್ತಸ್ಮೈ ನಮಃ**
**ಸ್ವಾದುಪರಾಙ್ಮುಖಾಯ ॥ ೬ ॥**

**ತಾ**—ರೂಪಕಗಳೆಲ್ಲವೂ ಆನಂದವನ್ನು ಒಸರಿಸುವವುಗಳು. ಪುರಾಣೇತಿ ಹಾಸಗಳಂತೆ ಇವುಗಳ ಪಠನ ಮತ್ತು ಪ್ರಯೋಗ ದರ್ಶನದಿಂದ ಧರ್ಮಾರ್ಥ

ಕಾಮಮೋಕ್ಷಗಳಲ್ಲಿ ಮತ್ತೆ ಕಲೆಗಳಲ್ಲಿ ಕುಶಲತೆ, ಕೀರ್ತಿ ಹಾಗೂ ಪ್ರೀತಿಗಳನ್ನು ಪಡೆಯಬಹುದೆಂದು ಹೇಳುವ ಅಲ್ಪ ಬುದ್ಧಿಯ ಮನುಷ್ಯನು ಸವಿಯ ಕಡೆಗೆ ಬೆನ್ನು ತಿರುಗಿಸಿದ್ದಾನೆಂದೇ ಹೇಳಬೇಕು. ಆತನಿಗೆ ನಮಸ್ಕಾರ. ಪರಮಾನಂದ ರೂಪವಾದ ರಸಗಳ ಸವಿಯೇ ರೂಪಕದ ಫಲ. 'ಧರ್ಮಾರ್ಥಕಾಮಮೋಕ್ಷೇಷು ವೈಚಕ್ಷಣ್ಯಂ ಕಲಾಸು ಚ । ಕರೋತಿ ಕೀರ್ತಿಂ ಪ್ರೀತಿಂ ಚ ಸಾಧುಕಾವ್ಯ ನಿಷೇವಣಂ' ಎಂಬ ಭಾಮಹನ ಕಾವ್ಯಾಲಂಕಾರದ (೧-೨) ಮಾತಿನ ಮಾರ್ಮಿಕ ವಾದ ವಿಮರ್ಶೆಯನ್ನು ಇಲ್ಲಿ ಗ್ರಂಥಕಾರನು ಮಾಡಿರುತ್ತಾನೆ.

**೭ ನಾಟ್ಯವೆಂದರೇನು ? ಅವಸ್ಥಾನುಕೃತಿರ್ನಾಟ್ಯಂ**

ಅನು—ಭಾವದ ವಿವಿಧ ಸ್ಥಿತಿಗಳ ಅನುಕರಣವೇ ನಾಟ್ಯವು. ರೂಪಕ ಗಳಲ್ಲಿ ಚಿತ್ರಿತವಾದ ಧೀರೋದಾತ್ತ ಮೊದಲಾದ ನಾಯಕರ ಅವಸ್ಥೆಗಳನ್ನು ಅಭಿನಯಗಳ ಮೂಲಕ ಅನುಕರಿಸುವುದೇ ನಾಟ್ಯ.

> ಚತುರ್ವಿಧೈರಭಿನಯೈಃ ಸಾತ್ತ್ವಿಕಾಂಗಿಕ ಪೂರ್ವಕೈಃ ।
> ಧೀರೋದಾತ್ತಾದ್ಯವಸ್ಥಾನುಕೃತಿರ್ನಾಟ್ಯಂ ರಸಾಶ್ರಯಂ ॥

ವಿದ್ಯಾನಾಥ ವಿರಚಿತವಾದ ಈ ಪ್ರತಾಪರುದ್ರೀಯದ ಶ್ಲೋಕದಲ್ಲಿ ನಾಟ್ಯ ಲಕ್ಷಣವನ್ನು ವಿಸ್ತರದಿಂದ ಕೊಡಲಾಗಿದೆ.

'ಅದೋಷೌ ಸಗುಣೌ ಸಾಲಂಕಾರೌ ಶಬ್ದಾರ್ಥೌ ಕಾವ್ಯಂ' ದೋಷ ವಿಲ್ಲದ, ಗುಣಗಳಿಂದ ಕೂಡಿದ ಅಲಂಕಾರಸಹಿತವಾದ ಶಬ್ದಾರ್ಥಗಳೇ ಕಾವ್ಯ. ಕಾವ್ಯವು ದೃಶ್ಯ, ಶ್ರವ್ಯ ಎಂದು ಎರಡು ವಿಧ. ರಘುವಂಶಾದಿಗಳು ಶ್ರವ್ಯ ಕಾವ್ಯಗಳು. ಅಭಿಜ್ಞಾನ ಶಾಕುಂತಲಾದಿಗಳು ದೃಶ್ಯ ಕಾವ್ಯಗಳು. ದೃಶ್ಯ ಕಾವ್ಯಗಳಲ್ಲಿ ನಾಟ್ಯವು ಪ್ರಧಾನವಾದುದರಿಂದ ಮೊದಲು ನಾಟ್ಯ ಲಕ್ಷಣವನ್ನು ತಿಳಿಸಲಾಗಿದೆ.

"ಆಂಗಿಕ, ವಾಚಿಕ, ಆಹಾರ್ಯಕ (ವೇಷ ಭೂಷಣಾದಿಗಳಿಂದ ಮಾಡುವ ಅಭಿನಯ) ಮತ್ತು ಸಾತ್ತ್ವಿಕ (ಸ್ತಂಭಾದಿಗಳು) ಎಂಬ ಚತುರ್ವಿಧ ಅಭಿನಯ ಗಳಿಂದ ಧೀರೋದಾತ್ತ, ಧೀರೋದ್ಧತ, ಧೀರಲಲಿತ, ಧೀರಶಾಂತ ಎಂಬ ನಾಲ್ಕು

ರೀತಿಯ ನಾಯಕರ ಮತ್ತು ಸ್ವಕೀಯಾ, ಪರಕೀಯಾ, ಸಾಧಾರಣಾ ಮೊದಲಾದ ಅನೇಕ ವಿಭಾಗವುಳ್ಳ ನಾಯಿಕೆಯರ ಅವಸ್ಥೆಯನ್ನು ಅನುಕರಿಸಿ ತೋರಿಸುವುದೇ ನಾಟ್ಯ. ಭಾವದ ಕ್ರಿಯಾರೂಪವೇ ಅವಸ್ಥೆ. ಇದರಲ್ಲಿ ರಸಾಭಿನಯಕ್ಕೆ ಪ್ರಾಧಾನ್ಯವಿರುತ್ತದೆ. ಪದಾರ್ಥ (ಕಾವ್ಯದ ವಿಷಯ)ಗಳನ್ನು ಪ್ರಕಾಶಗೊಳಿಸುವುದೇ ಅಭಿನಯ. 'ಅಭಿವ್ಯನಕ್ತಿ ಪದಾರ್ಥಾನಿತ್ಯಭಿನಯಃ' ಎಂದು ವ್ಯುತ್ಪತ್ತಿ. ಅಂಗೋಪಾಂಗಗಳ ಚೇಷ್ಟೆಯೇ ಆಂಗಿಕಾಭಿನಯ. ರೂಪಕಗಳ ಗಾನ, ಮಾತು ಮೊದಲಾದುವು ವಾಚಿಕಾಭಿನಯ. ಪ್ರದರ್ಶನಕ್ಕೆ ಬಳಸುವ ವೇಷ ಭೂಷಣ ಸಾಮಗ್ರಿಗಳು ಆಹಾರ್ಯ. ಅವರಿಂದ ಮಾಡುವ ಅಭಿನಯವು ಆಹಾರ್ಯಕ. ಅಂತಃಕರಣದಿಂದ ಉಂಟಾಗುವ ಸೂಕ್ಷ್ಮಭಾವಗಳ ಅಭಿನಯವು ಸಾತ್ತ್ವಿಕಾಭಿನಯ. 'ಸತ್ತ್ವಂ ಅಂತಃಕರಣಂ ತತೋನಿರ್ವೃತ್ತಃ ಸಾತ್ತ್ವಿಕಃ' ಎಂದು ವ್ಯುತ್ಪತ್ತಿ. 1) ಸ್ತಂಭ=ಅಂಗಗಳು ನಿಷ್ಕ್ರಿಯವಾಗುವುದು, 2) ಪ್ರಲಯ=ಚೇತನಾ ಇಲ್ಲದಿರುವುದು 3) ರೋಮಾಂಚ 4) ಸ್ವೇದ=ಬೆವರು 5) ವೈವರ್ಣ್ಯ=ಕಾಂತಿ ಹೀನತೆ 6) ವೇಪಥು=ನಡುಕ 7) ಅಶ್ರು=ಕಣ್ಣೀರು 8) ವೈಸ್ವರ್ಯ=ಸ್ವರ ಬದಲಾವಣೆ. ಇವು ಎಂಟು ಸಾತ್ತ್ವಿಕಾಭಿನಯಗಳು. ನಾಯಕರು—1) ಧೀರೋದಾತ್ತ–ಮಹಾಸತ್ತ್ವನೂ, ಅತಿಗಂಭೀರನೂ, ಆತ್ಮಶ್ಲಾಘನೆಯಿಲ್ಲದವನೂ, ಅಹಂಕಾರರಹಿತನೂ, ಸ್ಥಿರನೂ ಪ್ರತಿಜ್ಞಾಪಾಲಕನೂ ಆದ ನಾಯಕ. ಅಭಿಜ್ಞಾನ ಶಾಕುಂತಲದ ದುಷ್ಯಂತ, ನಾಗಾನಂದ ನಾಟಕದ ಜೀಮೂತವಾಹನ, ಉತ್ತರರಾಮ ಚರಿತದ ರಾಮ, ಮುಂತಾದವರು. 2) ಧೀರೋದ್ಧತ=ಪರಾಕ್ರಮದ ಅಹಂಕಾರ, ಮಾತ್ಸರ್ಯ, ಇಂದ್ರಜಾಲಾದಿ ಮಾಯೆಮೋಸಗಳಿಂದ ಕೂಡಿದ, ಕ್ರೂರನಾದ, ಚಂಚಲನಾದ,ತನ್ನನ್ನು ಹೊಗಳಿಕೊಳ್ಳುವ, ಅಶ್ವತ್ಥಾಮ, ಭೀಮಸೇನ, ಇಂದ್ರಜಿತ್ ಮುಂತಾದವರು. 3) ಧೀರಲಲಿತ—ಮಂತ್ರಿ ಮುಂತಾದವರಿಗೆ ರಾಜ್ಯಭಾರವನ್ನು ವಹಿಸಿ ನಿಶ್ಚಿಂತನಾಗಿ ಸಂಗೀತಾದಿ ಕಲೆಗಳಲ್ಲಿ ಆಸಕ್ತನಾದ, ಮೃದು ಸ್ವಭಾವದ, ಸುಖವಾಗಿರುವ ನಾಯಕನಿಗೆ ಧೀರಲಲಿತನೆಂದು ಹೆಸರು. ಸ್ವಪ್ನವಾಸವದತ್ತ ನಾಟಕದ ಉದಯನ ಮುಂತಾದವರು. 4) ಧೀರಶಾಂತ—ನಾಯಕನ ಸಾಮಾನ್ಯ ಗುಣಗಳಿಂದ ಕೂಡಿದವನು ಬ್ರಾಹ್ಮಣ ವ್ಯಾಪಾರಿ

ಮುಂತಾದವರು. ಮಾಲತೀ ಮಾಧವ ನಾಟಕದ ಮಾಧವ, ಮೃಚ್ಛಕಟಿಕ ನಾಟಕದ ಚಾರುದತ್ತ ಮುಂತಾದವರು.

**೮ ರೂಪಲಕ್ಷಣ—'ರೂಪಂ ದೃಶ್ಯತಯೋಚ್ಯತೇ'**

**ತಾ—**ನೀಲ ಕೆಂಪು ಇತ್ಯಾದಿ ಬಣ್ಣದಂತೆ ನಾಟ್ಯವು ದೃಶ್ಯವಾದುದರಿಂದ (ಕಣ್ಣೆದುರು ತೋರಿಸಲ್ಪಡುವುದರಿಂದ) ಅದನ್ನು ರೂಪವೆಂದು ಹೇಳುತ್ತಾರೆ.

**೯ ರೂಪಕಲಕ್ಷಣ—'ರೂಪಕಂ ತತ್ಸಮಾರೋಪಾತ್'**

**ತಾ—**ನಟರು ಅವಸ್ಥೆಯ ಅನುಕರಣದ ರೂಪವನ್ನು ಸಂಪೂರ್ಣವಾಗಿ ತಮ್ಮಲ್ಲಿ ಆರೋಪಿಸಿಕೊಳ್ಳುವುದರಿಂದ 'ರೂಪಕ' ಎಂದು ಹೆಸರು.

ರೂಪಕಾಲಂಕಾರದಲ್ಲಿ ಮುಖಚಂದ್ರ ಎಂದು ಮುಖದಲ್ಲಿ ಚಂದ್ರನ ಆರೋಪವನ್ನು (ಅಭೇದನಿಶ್ಚಯ) ಮಾಡಿಕೊಳ್ಳುವಂತೆ ನಾಟ್ಯವಾಡುತ್ತಿರುವ ನಟರಲ್ಲಿ ರಾಮಾದಿಪಾತ್ರಗಳ ಅವಸ್ಥೆಯ ಆರೋಪವನ್ನು ಮಾಡುವುದರಿಂದ ಅದನ್ನು ರೂಪಕವೆಂದೂ ಹೇಳುತ್ತಾರೆ. ಇಂದ್ರ, ಪುರಂದರ,ಶಕ್ರ, ಎಂಬಮೂರು ಶಬ್ದಗಳಿಂದ ಒಬ್ಬನನ್ನೇ ಹೇಳುವಂತೆ, ಸ್ವಲ್ಪ ಅರ್ಥವ್ಯತ್ಯಾಸವಿದ್ದರೂ ನಾಟ್ಯ, ರೂಪ, ರೂಪಕ, ಎಂಬ ಮೂರು ಶಬ್ದಗಳನ್ನು ಒಂದೇ ಅರ್ಥದಲ್ಲಿ ಪ್ರಯೋಗಿಸಲಾಗಿದೆ.

**೧೦ ರೂಪಕಗಳೆಷ್ಟು? ದಶಧೈವರಸಾಶ್ರಯಂ–**

**ತಾ||** ರಸವನ್ನು ಆಶ್ರಯಿಸಿದ ರೂಪಕಗಳು ಕೇವಲ ಹತ್ತು. ಶುದ್ಧ ರೂಪಕಗಳು ಹತ್ತು. 'ನಾಟಿಕ' ಮುಂತಾದ ಉಪರೂಪಕಗಳನ್ನು ಇದರ ಜತೆಗೆ ಸೇರಿಸಬಾರದು. ಅದಕ್ಕಾಗಿಯೇ 'ದಶಧೈವ' ಎಂಬ ಏವಕಾರ. 'ನಾಟಿಕಾ'ಮುಂತಾದುವು ಸಂಕೀರ್ಣ ರೂಪಕಗಳು ಅಥವಾ ಉಪರೂಪಕಗಳು. ಉಪರೂಪಕಗಳು ನಾಟಿಕಾ, ತ್ರೋಟಕ, ಗೋಷ್ಠೀ, ಸಟ್ಟಕ, ನಾಟ್ಯರಾಸಕ, ಪ್ರಸ್ಥಾನ, ಉಲ್ಲಾಪ್ಯ, ಕಾವ್ಯ, ಪ್ರೇಂಖಣ, ರಾಸಕ, ಸಂಲಾಪಕ, ಶ್ರೀಗದಿತ,

ಶಿಲ್ಪಕ, ವಿಲಾಸಿಕಾ, ದುರ್ಮಲ್ಲಿಕಾ, ಪ್ರಕರಣೀ, ಹಲ್ಲೀಶ, ಭಾಣಿಕಾ, ಎಂದು ಹದಿನೆಂಟು.

೧೧ ದಶರೂಪಕಗಳು—

**ನಾಟಕಂ ಸಪ್ರಕರಣಂ ಭಾಣಃ ಪ್ರಹಸನಂ ಡಿಮಃ ।**
**ವ್ಯಾಯೋಗಸಮವಾಕಾರೌ ವೀಥ್ಯಂಕೇಹಾಮೃಗಾ ದಶ ॥ ೮.॥**

**ತಾ॥** ನಾಟಕ, ಪ್ರಕರಣ, ಭಾಣ, ಪ್ರಹಸನ, ಡಿಮ, ವ್ಯಾಯೋಗ, ಸಮವಾಕಾರ, ವೀಥೀ, ಅಂಕ, ಈಹಾಮೃಗ ಹೀಗೆ ಹತ್ತು ರೂಪಕಗಳು. 'ಅಂಕ' ಎಂಬುದಕ್ಕೆ 'ಉತ್ಸೃಷ್ಟಿಕಾಂಕ' ಎಂದು ಪೂರ್ತಿ ಹೆಸರು.

೧೨ ನೃತ್ಯಲಕ್ಷಣ—ಅನ್ಯದ್ಭಾವಾಶ್ರಯಂ ನೃತ್ಯಂ

**ಅನು**—ಭಾವವನ್ನು ಆಶ್ರಯಿಸಿರುವ ನೃತ್ಯವು ನಾಟ್ಯದಿಂದ ಬೇರೆಯಾಗಿದೆ.

**ತಾ॥** ಡೋಂಬೀ, ಶ್ರೀಗದಿತ, ಭಾಣ, ಭಾಣೀ, ಪ್ರಸ್ಥಾನ, ರಾಸಕ, ಕಾವ್ಯ ಈ ಏಳು ನೃತ್ಯ ಭೇದಗಳು. ಇವು ಭಾಣವನ್ನು ಹೋಲುತ್ತವೆ. ಡೋಂಬೀ ಶ್ರೀಗದಿತಂ ಭಾಣೋ ಭಾಣೀಪ್ರಸ್ಥಾನರಾಸಕಾಃ। ಕಾವ್ಯಂ ಚ ಸಪ್ತನೃತ್ಯಸ್ಯ ಭೇದಾಃ ಸ್ಯುಸ್ತೇಽಪಿಭಾಣವತ್" ಎಂಬುದರಿಂದ ಇದು ತಿಳಿದು ಬರುತ್ತದೆ. ನೃತ್ಯವು ಭಾವವನ್ನು ಆಶ್ರಯಿಸಿದ್ದು, ಭಾವವೆಂದರೆ ಪದಾರ್ಥಾಭಿನಯ. ನೃತ್ಯದಲ್ಲಿ ಇದಕ್ಕೆ ಪ್ರಾಧಾನ್ಯವಿದೆ. ಭಾವವಿಷಯಕವಾದ ಆಂಗಿಕಾಭಿನಯವನ್ನು ಹೆಚ್ಚಾಗಿ ಒಳಗೊಂಡಿರುವುದೇ ನೃತ್ಯ, ನೃತೀ (ನೃತ್) ಗಾತ್ರ ವಿಕ್ಷೇಪೇ ಎಂಬ ಧಾತುವಿಗೆ ಅಂಗಚಲನೆ ಎಂದರ್ಥ. ಆ ಧಾತುವಿನಿಂದ ನೃತ್ಯ ಶಬ್ದವು ಹುಟ್ಟಿದೆ. ನೃತ್ಯವನ್ನು ಮಾಡುವವರಿಗೆ ನರ್ತಕರೆಂದು ಹೆಸರು. ನೃತ್ಯದಲ್ಲಿ ನೋಟಕ್ಕೆ ಪ್ರಾಧಾನ್ಯವಿದೆ. ಆದುದರಿಂದ ನೃತ್ಯದ ಭೇದಗಳಾದ ಡೋಂಬೀಶ್ರೀ ಗದಿತಾದಿಗಳು ರೂಪಕಗಳಿಗಿಂತ ಬೇರೆ. ಆದುದರಿಂದ ರೂಪಕಗಳು ಹತ್ತು ಎಂದು ನಿರ್ಧಾರವಾಗಿ ಹೇಳಿರುವುದು ಯುಕ್ತವಾಗಿದೆ. ನಾಟ್ಯವು

ರಸವಿಷಯವಾದುದು. ಅದನ್ನು ಒಳಗೊಂಡಿರುವ ನಾಟಕಾದಿಗಳಲ್ಲಿ ರಸಕ್ಕೆ ಪ್ರಾಧಾನ್ಯವಿದೆ. ರಸವು ಕಾವ್ಯಗಳಲ್ಲಿ ಪ್ರಯುಕ್ತವಾಗುವ ವಿಭಾವ, ಅನುಭಾವ ಮತ್ತು ವ್ಯಭಿಚಾರಿಭಾವವೆಂಬ ಪದಾರ್ಥಗಳ ಸಂಸರ್ಗದಿಂದ ಉಂಟಾಗುವ ವಾಕ್ಯಾರ್ಥಗಳಿಂದ ವ್ಯಕ್ತವಾಗುತ್ತದೆ. ಈ ವಾಕ್ಯಾರ್ಥಾಭಿನಯವನ್ನೇ ವಾಚಿ-ಕಾಭಿನಯವೆಂದು ಹೇಳುತ್ತಾರೆ. ಇದರಿಂದ ನಾಟಕಾದಿಗಳು ರಸವಿಷಯಕಗ ಳೆಂದು ತಿಳಿದುಬರುತ್ತದೆ. ನಟ ಅವಸ್ಪಂದನೆ ಎಂಬ ಧಾತುವಿನಿಂದ ನಾಟ್ಯಶಬ್ದವು ಉಂಟಾಗಿದೆ. ಅವಸ್ಪಂದನವೆಂದರೆ ಸ್ವಲ್ಪ ಚಲನೆ. ಹೀಗೆ ನಾಟಕದಲ್ಲಿ ಸಾತ್ತ್ವಿಕಾಭಿನಯಕ್ಕೆ ಆಧಿಕ್ಯವಿರುತ್ತದೆ. ನಾಟ್ಯವನ್ನು ಅಭಿನಯಿಸುವವರು 'ನಟರು'.

ಇನ್ನು ನೃತ್ತವೆಂಬುದು ಮತ್ತೊಂದು. ಗಾತ್ರ ವಿಕ್ಷೇಪ ಅರ್ಥಾತ್ ಅಂಗ ಚಲನೆಯು ನೃತ್ಯನೃತ್ತಗಳೆರಡರಲ್ಲಿಯೂ ಸಮಾನವಾಗಿದ್ದರೂ ನೃತ್ಯವು ಅನುಕರಣಾತ್ಮಕವಾಗಿದೆ. ಅಭಿನಯಾತ್ಮಕವಾಗಿ ಅನುಕಾರಶೂನ್ಯವಾಗಿರುವು ದರಿಂದ ನೃತ್ಯವು ನೃತ್ತಕ್ಕಿಂತ ಬೇರೆ.

**೧೩ ನೃತ್ತಲಕ್ಷಣ—ನೃತ್ತಂ ತಾಲಲಯಾಶ್ರಿತಂ.**

**ತಾ**—ತಾಲಲಯಗಳನ್ನು ಆಶ್ರಯಿಸಿದ್ದು ನೃತ್ತ. ಚಂಚತ್ಪುಟ ಮುಂತಾದುವು ತಾಲಗಳು. ದ್ರುತ ಮುಂತಾದುವು ಲಯಗಳು. ಅಭಿನಯಶೂನ್ಯವಾಗಿ ಕೇವಲ ತಾಲಲಯಗಳನ್ನು ಆಶ್ರಯಿಸಿದ ಅಂಗವಿಕ್ಷೇಪವೇ ನೃತ್ತ. ಇದು ನೃತ್ಯ ನಾಟ್ಯಗಳಿಗಿಂತ ಬೇರೆಯಾಗಿದೆ.

**೧೪ ನೃತ್ಯನೃತ್ತಗಳಲ್ಲಿ ಭೇದ—ಆದ್ಯಂ ಪದಾರ್ಥಾಭಿನಯೋ**
**ಮಾರ್ಗೋದೇಶೀ ತಥಾ ಪರಂ || ೯ ||**

ತಾ—ನೃತ್ಯವು ಪದಾರ್ಥಾಭಿನಯವುಳ್ಳದ್ದು. ಅದು ಶಾಸ್ತ್ರೀಯ ಪರಂಪರೆ ಯುಳ್ಳದ್ದು. ಅದಕ್ಕೆ 'ಮಾರ್ಗ'ವೆಂದೂ ಹೆಸರು. ಅಭಿನಯಶೂನ್ಯವಾದ ಜಾನಪದಕಲೆಗೆ 'ನೃತ್ತ'ವೆಂದೂ, 'ದೇಶೀ' ಎಂದೂ ಹೆಸರು. ಇದರಲ್ಲಿ 'ಅಂಗವಿಕ್ಷೇಪ'ಕ್ಕೆ ಪ್ರಾಧಾನ್ಯವಿದೆಯೆಂದು ಹಿಂದೆ ಹೇಳಿದೆ.

## ೧೫ ನೃತ್ಯನೃತ್ತಗಳಲ್ಲಿ ಪ್ರಭೇದಗಳು.

**ಮಧುರೋದ್ಧತಭೇದೇನ ತದ್ದ್ವಯಂ ದ್ವಿವಿಧಂ ಪುನಃ |**
**ಲಾಸ್ಯತಾಂಡವರೂಪೇಣ ನಾಟಕಾದ್ಯುಪಕಾರಕಂ || ೧೦ ||**

**ತಾ**—ನೃತ್ಯನೃತ್ತಗಳೆರಡೂ ಮಧುರ ಮತ್ತು ಉದ್ಧತಗಳೆಂಬ ಭೇದ ಗಳಿಂದ ಮತ್ತೆ ಎರಡು ವಿಧವಾಗಿವೆ. ಲಾಸ್ಯ ಎಂದರೆ ಮಧುರ, ತಾಂಡವ ಎಂದರೆ ಉದ್ಧತ. ಈ ಎರಡು ರೂಪಗಳಿಂದ ಅವು ನಾಟಕಾದಿ ದಶರೂಪಕಗಳಿಗೆ ಸಹಾಯಕವಾಗಿವೆ. ಸುಕುಮಾರವಾದ ನೃತ್ಯನೃತ್ತಗಳೆರಡಕ್ಕೂ ಲಾಸ್ಯ ಎನ್ನು ತ್ತಾರೆ. ಹಾಗೆಯೇ ಉದ್ಧತವಾದ ನೃತ್ಯನೃತ್ತಗಳೆರಡಕ್ಕೂ 'ತಾಂಡವ' ಎನ್ನು ತ್ತಾರೆ. ಅವು ನಾಟಕ ಮೊದಲಾದ ದಶರೂಪಕಗಳಿಗೆ ಸಹಾಯಕವಾಗಿರುವುದ ರಿಂದ ಅವುಗಳನ್ನು ಇಲ್ಲಿ ಉದ್ಧರಿಸಲಾಗಿದೆ. ನಾಟಕಾದಿಗಳಲ್ಲಿ ಪದಾರ್ಥಾಭಿನ ಯವನ್ನು ಒದಗಿಸುವುದರ ಮೂಲಕ ನೃತ್ಯವೂ, ಶೋಭೆಯನ್ನುಂಟುಮಾಡು ವುದರ ಮೂಲಕ ನೃತ್ತವೂ ಉಪಕಾರ ಮಾಡುತ್ತವೆ.

## ೧೬ ರೂಪಕ ಭೇದಕ್ಕೆ ಕಾರಣಗಳು.

ಎಲ್ಲಾ ರೂಪಕಗಳಲ್ಲಿಯೂ ಅನುಕರಣೆಯು ಸಮಾನವಾಗಿರುವುದರಿಂದ ಅಭೇದವೇ ತೋರುತ್ತಿರುವಾಗ ಅವು ಹತ್ತು ವಿಧ ಎನ್ನುವುದು ಹೇಗೆ ? ಎಂದರೆ.

**ವಸ್ತು ನೇತಾ ರಸಸ್ತೇಷಾಂ ಭೇದಕಃ—**

**ತಾ**—ರೂಪಕ ಭೇದಗಳಿಗೆ ಮುಖ್ಯಕಾರಣಗಳಾದ ೧ ವಸ್ತು ೨ ನಾಯಕ ೩–ರಸ—ಇವುಗಳಿಂದಾಗಿ ರೂಪಕಗಳಲ್ಲಿ ಪರಸ್ಪರ ವ್ಯತ್ಯಾಸವು ತೋರುತ್ತದೆ.

**೧೭ ವಸ್ತುಭೇದ—'ವಸ್ತು ಚದ್ವಿಧಾ'** ವಸ್ತುವು ಎರಡು ವಿಧ.

**೧೮ ವಸ್ತುಭೇದಗಳ ಲಕ್ಷಣ—ತತ್ರಾಧಿಕಾರಿಕಂ ಮುಖ್ಯಮಂಗಂ ಪ್ರಾಸಂಗಿಕಂ ವಿದುಃ.**

**ತಾ**—ಅವುಗಳಲ್ಲಿ ಪ್ರಧಾನವಾದ ವಸ್ತುವಿಗೆ ಆಧಿಕಾರಿಕವೆಂದು ಹೆಸರು. **ಉದಾ**—ರಾಮಾಯಣದಲ್ಲಿ ರಾಮಸೀತೆಯರ ವೃತ್ತಾಂತ. ಅದಕ್ಕೆ ಅಂಗಭೂತವಾದ ವಸ್ತುವು ಪ್ರಾಸಂಗಿಕ. ಉದಾ. ರಾಮಾಯಣದಲ್ಲಿ ವಿಭೀಷಣ ಸುಗ್ರೀವಾದಿಗಳ ವೃತ್ತಾಂತ.

**೧೯ ಆಧಿಕಾರಿಕ ಶಬ್ದ ವ್ಯುತ್ಪತ್ತಿ ಮತ್ತು ಲಕ್ಷಣ.**

**ಅಧಿಕಾರಃ ಫಲಸ್ವಾಮ್ಯಮಧಿಕಾರೀ ಚ ತತ್ಪ್ರಭುಃ ।**
**ತನ್ನಿರ್ವರ್ತ್ಯಮಭಿವ್ಯಾಪಿ ವೃತ್ತಂ ಸ್ಯಾದಾಧಿಕಾರಿಕಂ ॥ ೧೨ ॥**

**ತಾ**—ಆಧಿಕಾರಿಕ ಪದದ ವ್ಯುತ್ಪತ್ತಿಯನ್ನು ಅದರ ಲಕ್ಷಣವನ್ನು ಇಲ್ಲಿ ಸ್ಪಷ್ಟಗೊಳಿಸಿದೆ. ಫಲದ ಮೇಲೆ ಸ್ವಾಮಿತ್ವವನ್ನು ಪಡೆಯುವುದು ಅಧಿಕಾರ. ಫಲವನ್ನು ಹೊಂದುವವನು ಅಧಿಕಾರಿ. ಆ ಅಧಿಕಾರ ಅಥವಾ ಅಧಿಕಾರಿಯ ಮೂಲಕ ಅಧಿಕಾರಿಗೆ ಫಲಪ್ರಾಪ್ತಿಯಾಗುವವರೆಗೆ ನಿರ್ವಾಹಿತವಾಗುವ ಇತಿ–ವೃತ್ತ ಅಥವಾ ಕಥಾಭಾಗಕ್ಕೆ ಆಧಿಕಾರಿಕವಸ್ತುವೆಂದು ಹೆಸರು. ರಾಮಾಯಣದಲ್ಲಿ ರಾಕ್ಷಸವಧ, ಸೀತಾಪ್ರಾಪ್ತಿ ಮತ್ತು ರಾಮರಾಜ್ಯ ಸ್ಥಾಪನೆಗಳು ಫಲಗಳು. ರಾಮನು ಅಧಿಕಾರಿ. ಕಥೆಯ ಪ್ರಾರಂಭದಿಂದ ರಾಕ್ಷಸ ವಧಾದಿಫಲಪ್ರಾಪ್ತಿಯವರೆಗಿನ ಕಥೆಯು ಆಧಿಕಾರಿಕ ಕಥಾವಸ್ತುವು.

**೨೦ ಪ್ರಾಸಂಗಿಕ ಲಕ್ಷಣ—**

**ಪ್ರಾಸಂಗಿಕಂ ಪರಾರ್ಥಸ್ಯ ಸ್ವಾರ್ಥೋ ಯಸ್ಯ ಪ್ರಸಂಗತಃ ।**

**ತಾ**—ಪರಾರ್ಥಸ್ಯ ಯಸ್ಯ ಇತಿವೃತ್ತಸ್ಯ ಪ್ರಸಂಗತಃ ಸ್ವಾರ್ಥಃ, ತತ್ ಪ್ರಾಸಂಗಿಕಂ ಇತಿವೃತ್ತಂ. ಪ್ರಧಾನೇತಿವೃತ್ತದ ಪ್ರಯೋಜನಕ್ಕೋಸ್ಕರ ಇದ್ದು ಪ್ರಸಂಗ ವಶದಿಂದ ತನ್ನ ಇಷ್ಟಾರ್ಥವನ್ನು ಪಡೆಯುವ ಇತಿವೃತ್ತಕ್ಕೆ ಪ್ರಾಸಂಗಿಕೇತಿವೃತ್ತವೆಂದು ಹೆಸರು. ಹಿಂದೆ ಹೇಳಿದ ಉದಾಹರಣೆಗಳಲ್ಲಿ ಪ್ರಾಸಂಗಿಕವಾದ ಸುಗ್ರೀವ ವಿಭೀಷಣರ ಕಥೆಗಳು ಆಧಿಕಾರಿಕವಾದ ಶ್ರೀರಾಮನ ಕಥೆಗೆ ಪೋಷಣೆ ಕೊಡುತ್ತವೆ. ಶ್ರೀರಾಮನ ಕಥಾಫಲಕ್ಕೆ ಆ ಬೇರೆಯ ಕಥೆಗಳೂ ಕಾರಣವಾಗುತ್ತವೆ. ಆ ಕಥೆಗಳಿಗೆ ತನ್ನದೇ ಆದ ಪ್ರಯೋಜನವೂ ಇರುತ್ತದೆ.

೨೧ ಪ್ರಾಸಂಗಿಕದ ಭೇದಗಳು.

**ಸಾನುಬಂಧಂಪತಾಕಾಖ್ಯಂ ಪ್ರಕರೀಚ ಪ್ರದೇಶಭಾಕ್ ||೧೩||**

**ತಾ||**—ಪ್ರಾಸಂಗಿಕವು ಎರಡು ವಿಧ. ಸಾನುಬಂಧ ಅಂದರೆ ಅನುಬಂಧ ಸಹಿತವಾದುದು 'ಪತಾಕಾ' ಎಂದು ಹೇಳಲ್ಪಡುತ್ತದೆ. ಅನುಬಂಧ=continuity (ನಿರಂತರತೆ) ಯಾವುದು ಪ್ರಧಾನ ವೃತ್ತಾಂತದೊಡನೆ ದೂರದವರೆಗೆ ಸಾಗುತ್ತಹೋಗುತ್ತದೆಯೋ ಅಂತಹ ಪ್ರಾಸಂಗಿಕ ವೃತ್ತಾಂತಕ್ಕೆ 'ಪತಾಕಾ' ಎಂದು ಹೆಸರು. ಪ್ರದೇಶಭಾಗಿಯಾದ ಅಂದರೆ ಯಾವುದೋ ಒಂದು ಕಡೆಯಲ್ಲಿ ಸ್ವಲ್ಪ ಮಾತ್ರ ಬರುವ ಕಥೆಯು 'ಪ್ರಕರೀ'. ರಾಮಾಯಣದಲ್ಲಿ ಸುಗ್ರೀವ ಮುಂತಾದವರ ಕಥೆ 'ಪತಾಕಾ'. ಪತಾಕೆಯಂತೆ 'ಧ್ವಜ'ದ ಚಿಹ್ನೆಯಂತೆ ಮುಖ್ಯನಾಯಕನಿಗೆ ಉಪಕಾರಿಯಾಗಿರುವ ಕಾರಣ ಈ ಹೆಸರು. ರಾಮಾಯಣ ದಲ್ಲಿ ಶ್ರಮಣ ಮತ್ತು ಶಬರೀವೃತ್ತಾಂತವು ಪ್ರಕರೀ.

೨೨ ಪತಾಕಾಸ್ಥಾನಕ.

**ಪ್ರಸ್ತುತಾಗಂತು ಭಾವಸ್ಯ ವಸ್ತುನೋಽನ್ಯೋಕ್ತಿ ಸೂಚಕಂ ।**
**ಪತಾಕಾಸ್ಥಾನಕಂ ತುಲ್ಯಸಂವಿಧಾನ ವಿಶೇಷಣಾತ್ || ೧೪ ||**

**ತಾ**—ಪತಾಕಾಲಕ್ಷಣವನ್ನು ಹೇಳುವ ಪ್ರಸಂಗದಲ್ಲಿಯೇ 'ಪತಾಕಾ ಸ್ಥಾನ'ದ ಲಕ್ಷಣವನ್ನು ಹೇಳಿದೆ. ಯಾವುದೊಂದು ಪ್ರಕರಣ ಮುಂತಾದುವು ಗಳಲ್ಲಿ ಮುಂದೆ ನಡೆಯಲಿರುವ ಘಟನೆಯನ್ನು ಸೂಚಿಸುವ ರೂಪವು 'ಪತಾಕಾ ಸ್ಥಾನಕ'. ಅದು ಧ್ವಜದಂತೆ ಬರಲಿರುವುದರ ಸೂಚನೆಯನ್ನು ಕೊಡುವ ಕಾರಣ ಅದಕ್ಕೆ ಈ ಹೆಸರು. ಅದು ಸಮಾನ ಇತಿ ವೃತ್ತದ ಮೂಲಕ, ಮತ್ತು ಸಮಾನವಿಶೇಷಣದ ಮೂಲಕವೆಂದು ಎರಡು ವಿಧ. ಮೊದಲನೆಯದು ಅನ್ಯೋಕಿ ಅಥವಾ ಅಪ್ರಸ್ತುತ ಪ್ರಶಂಸೆಯ ರೂಪವಾದುದು. ಎರಡನೆಯದು ಸಮಾಸೋಕ್ತಿ ರೂಪವಾದುದು.

ಉದಾ—ಅನ್ಯೋಕ್ತಿ ಸಹಿತವಾದ ಸಮಾನೇತಿವೃತ್ತದ 'ಪತಾಕಾಸ್ಥಾನಕ'ಕ್ಕೆ ಉದಾಹರಣ—

**ಯಾತೋಽಸ್ಮಿ ಪದ್ಮನಯನೇ ಸಮಯೋ ಮಮೈಷಃ**
**ಸುಪ್ತಾಮಯೈವ ಭವತೀ ಪ್ರತಿಬೋಧನೀಯಾ ।**
**ಪ್ರತ್ಯಾಯನಾಮಯಮಿತೀವ ಸರೋರುಹಿಣ್ಯಾಃ**
**ಸೂರ್ಯೋಽಸ್ತಮಸ್ತಕ ನಿವಿಷ್ಟಕರಃ ಕರೋತಿ ॥**

['ಎಲೈ ಕಮಲನೇತ್ರೇ, ನಾನೀಗ ಹೊರಟಿದ್ದೇನೆ. ಇದು ಹೊರಡುವ ವೇಳೆ. ಈಗ ನಿದ್ದೆ ಮಾಡುವ ನಿನ್ನನ್ನು ಪುನಃ ನಾನೇ ಎಚ್ಚರಿಸಬೇಕು.' ಹೀಗೆ ವಿಶ್ವಾಸ ನೀಡುತ್ತಿರುವವನಂತೆ ಅಸ್ತಾಚಲಶಿಖರದಲ್ಲಿ ಕರ (ಕಿರಣಗಳೆಂಬ ಕೈಗಳನ್ನು) ಗಳನ್ನಿಟ್ಟಿರುವ ಸೂರ್ಯನು ಕಮಲಿನಿಯನ್ನು ಸಂತೈಸುತ್ತಿದ್ದಾನೆ.]

(ಅಪ್ರಸ್ತುತ ಪ್ರಶಂಸಾ ಸ್ಯಾತ್ ಸಾಯತ್ರ ಪ್ರಸುತಾಶ್ರಯಾ) ಅಪ್ರಸ್ತುತವಾದ ವೃತ್ತಾಂತದ ವರ್ಣನೆಯು ಪ್ರಸ್ತುತ ವೃತ್ತಾಂತವನ್ನು ಸೂಚಿಸುವಾಗ ಅದು ಅಪ್ರಸ್ತುತ ಪ್ರಶಂಸೆ ಅಥವಾ ಅನ್ಯೋಕ್ತಿಯಾಗುತ್ತದೆ ಎಂದು ಲಕ್ಷಣ.

ಶ್ಲೇಷದಿಂದ ಇಲ್ಲಿ ಪ್ರೀತಿಯ ನಾಯಿಕೆಯ ಪರವಾದ ಅರ್ಥವೂ ಹೊಳೆಯುತ್ತದೆ. ಇಲ್ಲಿ ಸೂರ್ಯ ಪದ್ಮಿನಿಯರ ವರ್ಣನೆಯ ಮೂಲಕ ಮುಂದೆ ಬರುವ ಉದಯನ ರತ್ನಾವಲೀ ವೃತ್ತಾಂತವು ಸೂಚಿತವಾಗುತ್ತದೆ.

ಸಮಾಸೋಕ್ತಿಸಹಿತವಾದ ಸಮಾನ ವಿಶೇಷಣದ ಪತಾಕಾಸ್ಥಾನ—
(ರತ್ನಾ—೨೪)

**ಉದ್ದಾಮೋತ್ಕಲಿಕಾಂ ವಿಪಾಂಡುರರುಚಂ ಪ್ರಾರಬ್ಧ-**
**ಜೃಂಭಾಂ ಕ್ಷಣಾತ್,**
**ಆಯಾಸಂ ಶ್ವಸನೋದ್ಗಮೈರವಿರಲೈರಾತನ್ವತೀಮಾತ್ಮನಃ ।**
**ಅದ್ಯೋದ್ಯಾನಲತಾಮಿಮಾಂ ಸಮದನಾಂ ನಾರೀಮಿವಾನ್ಯಾಂ-**
**ಧ್ರುವಂ**
**ಪಶ್ಯನ್ ಕೋಪವಿಪಾಟಲದ್ಯುತಿಮುಖಂ ದೇವ್ಯಾಃ ಕರಿಷ್ಯಾಮ್ಯಹಂ ॥**

ಮೇಲಕ್ಕೆದ್ದಿರುವ ಮೊಗ್ಗುಗಳುಳ್ಳ, ಪಾಂಡುವರ್ಣದ, ಹೂವನ್ನು

ಅರಳಿಸುತ್ತಿರುವ, ಮದನ ವೃಕ್ಷವನ್ನಾಶ್ರಯಿಸಿರುವ, ಹಾಗೂ ನಿರಂತರವಾದ ಗಾಳಿಗಳಿಂದ ಅಲುಗುತ್ತಾ ಆಯಾಸ ಪಡುತ್ತಿರುವ ಈ ಉದ್ಯಾನ ಲತೆಯನ್ನು (ಕಾತರಳಾಗಿ ವರ್ಣವಿಹೀನತೆಯನ್ನು ಹೊಂದಿ ಆಕಳಿಸುತ್ತಿರುವ ಅವಿರಲವಾದ ಶ್ವಾಸೋಚ್ಛ್ವಾಸಗಳಿಂದ ಆಯಾಸವನ್ನು ಸೂಚಿಸುವ ಕಾಮಸಹಿತಳಾದ) ಅನ್ಯಸ್ತ್ರೀಯನ್ನು ನೋಡುತ್ತಿರುವಂತೆ ನೋಡುತ್ತಾ ನಾನು ಈಗ ನನ್ನ ದೇವಿಯ ಮುಖವು ಕೆಂಪಾಗುವಂತೆ ಮಾಡುತ್ತೇನೆ. [ಇಲ್ಲಿ ಲತೆಯ ವರ್ಣನೆಯು ಸಮಾನ ವಿಶೇಷಣದ ಮೂಲಕ ಉದಯನ ರತ್ನಾವಲಿಯರ ಪ್ರಣಯವನ್ನೂ, ವಾಸವದತ್ತೆಯ ಕೋಪವನ್ನು ಸೂಚಿಸುತ್ತದೆ. ಇಲ್ಲಿ ಸಮಾಸೋಕ್ತಿಯಿದೆ. ಸಮಾಸೋಕ್ತಿಃ ಪರಿಸ್ಫೂರ್ತಿಃ ಪ್ರಸ್ತುತೇಽಪ್ರಸ್ತುತಸ್ಯ ಚೇತ್. ಪ್ರಸ್ತುತ ವೃತ್ತಾಂತವನ್ನು ವರ್ಣಿಸುವಾಗ ವಿಶೇಷಣಸಾಮ್ಯದಿಂದ ಅಪ್ರಸ್ತುತ ವೃತ್ತಾಂತವು ಸೂಚಿತವಾದರೆ ಅದು ಸಮಾಸೋಕ್ತಿಯು.)

೨೩ ವಸ್ತುಭೇದ—

**ಪ್ರಖ್ಯಾತೋತ್ಪಾದ್ಯ ಮಿಶ್ರತ್ವಭೇದಾತ್ ತ್ರೇಧಾಪಿ ತತ್ ತ್ರಿಧಾ ।**
**ಪ್ರಖ್ಯಾತಮಿತಿಹಾಸಾದೇರುತ್ಪಾದ್ಯಂ ಕವಿಕಲ್ಪಿತಂ ॥ ೧೫ ॥**
**ಮಿಶ್ರಂಚ ಸಂಕರಾತ್ತಾಭ್ಯಾಂ ದಿವ್ಯಮರ್ತ್ಯಾದಿಭೇದತಃ ।**

ತಾ—ಆಧಿಕಾರಿಕ ಮತ್ತು ಪ್ರಾಸಂಗಿಕದಲ್ಲಿನ ಪತಾಕಾ, ಪ್ರಕರೀ ಎಂಬ ಮೂರು ಭೇದವುಳ್ಳ ವಸ್ತುವು, ಪ್ರಖ್ಯಾತ, ಉತ್ಪಾದ್ಯ ಮತ್ತು ಮಿಶ್ರ ಎಂಬುದಾಗಿ ಪುನಃ ಮೂರು ವಿಧವಾಗಿದೆ. ಇತಿಹಾಸದಿಂದ ಬಂದುದು ಪ್ರಖ್ಯಾತ. ಕವಿಯಿಂದ ಕಲ್ಪಿತವಾದುದು ಉತ್ಪಾದ್ಯ. ಇವೆರಡರ ಬೆರಕೆಯುಳ್ಳದ್ದು ಮಿಶ್ರ. ಇವಲ್ಲದೆ ವಸ್ತುವು ದಿವ್ಯ, ಮರ್ತ್ಯ, ದಿವ್ಯಾದಿವ್ಯವೆಂದು ಮತ್ತೆ ಮೂರು ವಿಧ. ಉದಾ— ವೇಣೀಸಂಹಾರ – ಪ್ರಖ್ಯಾತ, ಮಾಲತೀಮಾಧವ–ಉತ್ಪಾದ್ಯ, ಅಭಿಜ್ಞಾನಶಾಕುಂತಲ–ಮಿಶ್ರ.

೨೪ ಇತಿವೃತ್ತದ ಫಲ—

**ಕಾರ್ಯಂ ತ್ರಿವರ್ಗಸ್ತಚ್ಛುದ್ಧಮೇಕಾನೇಕಾನುಬಂಧಿಚ.**

ತಾ—ಕಾರ್ಯ ಅಂದರೆ ಕಥೆಯ ಫಲವು ತ್ರಿವರ್ಗ (ಧರ್ಮ, ಅರ್ಥ, ಕಾಮ) ರೂಪವಾದದ್ದು. ಅದು ಒಂದೇ ಫಲವುಳ್ಳದ್ದಾದರೆ ಶುದ್ಧ; ಎರಡು ಫಲವುಳ್ಳದ್ದಾಗಿದ್ದರೆ ಏಕಾನುಬಂಧಿ; ಮೂರು ಫಲವಾಗಿದ್ದರೆ ಅನೇಕಾನು ಬಂಧಿ.

**೨೫ ಫಲಸಾಧನ—ಬೀಜ ಲಕ್ಷಣ. ಸ್ವಲ್ಪೋದ್ದಿಷ್ಟಸ್ತು ತದ್ಧೇತು ರ್ಬೀಜಂ ವಿಸ್ತಾರ್ಯನೇಕಧಾ |**

ತಾ—ರೂಪಕದ ಆರಂಭದಲ್ಲಿ ಅಲ್ಪವಾಗಿದ್ದು ಅನಂತರ ಬಹುಪ್ರಕಾರ ದಿಂದ ವಿಸ್ತರಗೊಳ್ಳುವ ಕಾರ್ಯದ ಮೂಲ ಕಾರಣವು ಬೀಜ. ಉದಾ— ವೇಣೀಸಂಹಾರದಲ್ಲಿ ದ್ರೌಪದಿಯ 'ಕೇಶಬಂಧನ'ದ ಉದ್ದೇಶವುಳ್ಳ, ಭೀಮನ ಕ್ರೋಧದಿಂದ ಪರಿಪುಷ್ಟವಾದ ಯುಧಿಷ್ಠಿರನ ಉತ್ಸಾಹವೇ ಬೀಜವು.

**೨೬ ಬಿಂದು ಲಕ್ಷಣ.**

**ಅವಾಂತರಾರ್ಥವಿಚ್ಛೇದೇ ಬಿಂದುರಚ್ಛೇದಕಾರಣಂ || ೧೭ ||**

ತಾ—ಬೇರೊಂದು ವಿಷಯದಿಂದ ವೃತ್ತವು ಕಡಿದು ಹೋಗುವ ಸಂದರ್ಭ ದಲ್ಲಿ ಅದು ಕಡಿಯದೆ ಒಂದೇ ರೀತಿಯಲ್ಲಿ ಮುಂದುವರಿಯುವಂತೆ ಮಾಡುವುದು 'ಬಿಂದು'. ತೈಲಬಿಂದುವು ನೀರಿನಲ್ಲಿ ಹರಡುವಂತೆ ಹರಡುವ ಕಾರಣ 'ಬಿಂದು' ಎಂದು ಹೆಸರು.

**೨೭ ಐದು ಅರ್ಥಪ್ರಕೃತಿಗಳು.**

**ಬೀಜಬಿಂದುಪತಾಕಾಖ್ಯಪ್ರಕರೀಕಾರ್ಯಲಕ್ಷಣಾಃ |**
**ಅರ್ಥಪ್ರಕೃತಯಃ ಪಂಚ ತಾ ಏತಾಃ ಪರಿಕೀರ್ತಿತಾಃ || ೧೮ ||**

ತಾ—ಹಿಂದೆ ಹೇಳಿದ ಬೀಜ ಮತ್ತು ಬಿಂದು, ಪತಾಕಾ, ಪ್ರಕರೀ ಕಾರ್ಯಗಳು ಅರ್ಥ ಪ್ರಕೃತಿಗಳು. ಪ್ರಯೋಜನ ಸಿದ್ಧಿಗೆ ಕಾರಣವಾಗುವುವು ಗಳು ಅರ್ಥ ಪ್ರಕೃತಿಗಳು.

೨೮ ಪಂಚಾವಸ್ಥೆಗಳು—

**ಅವಸ್ಥಾಃ ಪಂಚಕಾರ್ಯಸ್ಯ ಪ್ರಾರಬ್ಧಸ್ಯ ಫಲಾರ್ಥಿಭಿಃ ।**
**ಆರಂಭಯತ್ನ ಪ್ರಾಪ್ತ್ಯಾಶಾ ನಿಯತಾಪ್ತಿಫಲಾಗಮಾಃ ॥ ೧೯ ॥**

ತಾ—ಫಲಾಪೇಕ್ಷಿಗಳಾದ ಇತಿವೃತ್ತದ ನಾಯಕ ಮುಂತಾದವರಿಂದ ಆರಂಭಿಸಲ್ಪಟ್ಟ ಕಾರ್ಯಕ್ಕೆ ಅದು ಕೊನೆಗಾಣುವವರೆಗೆ, ಆರಂಭ, ಯತ್ನ, ಪ್ರಾಪ್ತ್ಯಾಶಾ, ನಿಯತಾಪ್ತಿ, ಫಲಾಗಮ ಎಂಬ ಐದು ಅವಸ್ಥೆಗಳುಂಟಾಗುತ್ತವೆ. ಅರ್ಥಪ್ರಕೃತಿಗಳು ಕಥಾವಸ್ತುವಿನ ಉಪಾದಾನಕಾರಣಗಳಾಗಿದ್ದು (ಮಡಕೆಗೆ ಮಣ್ಣಿನಂತೆ) ಕಥಾವಸ್ತುವಿಗೆ ಸಂಬಂಧಪಟ್ಟಿರುತ್ತವೆ. ಅವಸ್ಥೆಗಳು ನಾಯಕನ ಮನಃಸ್ಥಿತಿಗೆ ಸಂಬಂಧಪಟ್ಟಿರುತ್ತವೆ. ಇದೇ ಅವರೆಡರಲ್ಲಿರುವ ವ್ಯತ್ಯಾಸ.

೨೯ ಆರಂಭ ಲಕ್ಷಣ—

**ಔತ್ಸುಕ್ಯಮಾತ್ರಮಾರಂಭಃ ಫಲಲಾಭಾಯಭೂಯಸೇ ।**

ತಾ—ಆತ್ಯಂತಿಕ ಫಲ ಪ್ರಾಪ್ತಿಗಾಗಿ ನಾಯಕಾದಿಗಳಲ್ಲಿ ಉಂಟಾಗುವ ಉತ್ಸುಕತೆಯೇ 'ಆರಂಭ'.

೩೦ ಪ್ರಯತ್ನಲಕ್ಷಣ—

**ಪ್ರಯತ್ನಸ್ತು ಫಲಾಪ್ರಾಪ್ತೌ ವ್ಯಾಪಾರೋಽತಿತ್ವರಾನ್ವಿತಃ ॥೨೦॥**

ತಾ—ಫಲವು ದೊರಕದಿದ್ದಾಗ ಅದಕ್ಕಾಗಿ ಉಪಾಯಗಳನ್ನು ಯೋಜಿಸಿ ಕೊಂಡು ಅತಿತ್ವರೆಯಿಂದ ಕೆಲಸನಲ್ಲಿ ತೊಡಗುವುದು.

೩೧ ಪ್ರಾಪ್ತ್ಯಾಶಾ ಲಕ್ಷಣ—

**ಉಪಾಯಾಪಾಯಶಂಕಾಭ್ಯಾಂ ಪ್ರಾಪ್ತ್ಯಾಶಾ ಕಾರ್ಯಸಂಭವಃ ।**

ತಾ—ಉಪಾಯದ ಜತೆಗೆ ಅಪಾಯದ ಶಂಕೆಯೂ ಇದ್ದು ಸಂಪೂರ್ಣ ಫಲಪ್ರಾಪ್ತಿಯ ನಿರ್ಧಾರವಿಲ್ಲದಿರುವುದು ಪ್ರಾಪ್ತ್ಯಾಶೆ.

### ೩೨ ನಿಯತಾಪ್ತಿಲಕ್ಷಣ.

ಅಪಾಯಾಭಾವತಃ ಪ್ರಾಪ್ತಿರ್ನಿಯತಾಪ್ತಿಃ ಸುನಿಶ್ಚಿತಾ ॥ ೨೦ ॥

ತಾ—ವಿಘ್ನಗಳು ಕಳೆದು ಹೋಗಿ ಅಪಾಯಗಳು ಇಲ್ಲದಿರುವುದರಿಂದ ಫಲಪ್ರಾಪ್ತಿಯು ಪೂರ್ಣವಾಗಿ ನಿಶ್ಚಿತವಾಗಿದ್ದರೆ 'ನಿಯತಾಪ್ತಿ'.

### ೩೩ ಫಲಾಗಮಲಕ್ಷಣ.

ಸಮಗ್ರಫಲಸಂಪತ್ತಿಃ ಫಲಯೋಗೋ ಯಥೋದಿತಃ ।

ತಾ—ಸಂಪೂರ್ಣ ಫಲಸಂಪತ್ತು ದೊರಕುವುದು 'ಫಲಾಗಮ' (ಫಲ ಯೋಗ.)

### ೩೪ ಸಂಧಿಗಳ ಉತ್ಪತ್ತಿ.

ಅರ್ಥಪ್ರಕೃತಯಃ ಪಂಚ ಪಂಚಾವಸ್ಥಾಸಮನ್ವಿತಾಃ ॥ ೨೨ ॥
ಯಥಾಸಂಖ್ಯೇನ ಜಾಯಂತೇ ಮುಖಾದ್ಯಾಃ ಪಂಚಸಂಧಯಃ ।

ತಾ—ಬೀಜವೇ ಮೊದಲಾದ ಐದು ಅರ್ಥಪ್ರಕೃತಿಗಳು, ಕ್ರಮವಾಗಿ ಆರಂಭ ಮೊದಲಾದ ಐದು ಅವಸ್ಥೆಗಳೊಡನೆ ಸೇರಿದಾಗ ಮುಖಮೊದಲಾದ ಐದು ಸಂಧಿಗಳು ಉಂಟಾಗುತ್ತವೆ.

### ೩೫ ಸಂಧಿಲಕ್ಷಣ.

ಅಂತರೈಕಾರ್ಥಸಂಬಂಧಃ ಸಂಧಿರೇಕಾನ್ವಯೇ ಸತಿ ॥ ೨೩ ॥

ತಾ—ಒಂದೇ ಪ್ರಯೋಜನಕ್ಕಾಗಿ ಹೊಂದಿಕೊಂಡ ಕಥಾಂಶಗಳಲ್ಲಿ, ಒಂದೊಂದರ ಫಲವೂ, ಆತ್ಯಂತಿಕವಾದ ಮತ್ತೊಂದು ಫಲವನ್ನು ಕೊಡುವಂತೆ ಕಥಾಂಶಗಳಲ್ಲಿ ಒಂದು ಮತ್ತೊಂದರ ನಡುವೆ ಉಂಟಾಗುವ ಸಂಬಂಧಕ್ಕೆ ಸಂಧಿ ಎಂದು ಹೆಸರು.

೩೭ ಪಂಚಸಂಧಿಗಳು.

**ಮುಖಪ್ರತಿಮುಖೇ ಗರ್ಭಃ ಸಾವಮರ್ಶೋಪಸಂಹೃತಿಃ |**

**ತಾ**—ಮುಖ, ಪ್ರತಿಮುಖ, ಗರ್ಭ, ಅವಮರ್ಶ (ವಿಮರ್ಶ) ಉಪ ಸಂಹೃತಿ (ಉಪಸಂಹಾರ ಅಥವಾ ನಿರ್ವಹಣ) ಎಂದು ಐದು ಸಂಧಿಗಳು.

೩೭ ಮುಖಸಂಧಿಲಕ್ಷಣ—

**ಮುಖಂ ಬೀಜಸಮುತ್ಪತ್ತಿರ್ನಾನಾರ್ಥರಸ ಸಂಭವಾ || ೨೪ ||**

**ಅಂಗಾನಿ ದ್ವಾದಶೈತಸ್ಯ ಬೀಜಾರಂಭಸಮನ್ವಯಾತ್ |**

**ತಾ**—ಬೀಜದ ಸರಿಯಾದ ಉತ್ಪತ್ತಿಯೇ ಮುಖಸಂಧಿ. ಈ ಬೀಜವು ವಿವಿಧ ಪ್ರಯೋಜನಗಳಿಗೆ ಮತ್ತು ರಸಗಳಿಗೆ ಕಾರಣವಾಗುತ್ತದೆ. ಬೀಜವೆಂಬ ಅರ್ಥಪ್ರಕೃತಿ ಮತ್ತು ಆರಂಭವೆಂಬ ಅವಸ್ಥೆಗಳ ಸಮನ್ವಯದಿಂದ ಅವೆರಡನ್ನು ಹೊಂದಿಸುವ ಹನ್ನೆರಡು ಅಂಗಗಳು ಮುಖಸಂಧಿಯಲ್ಲಿರುತ್ತವೆ. ಪ್ರಹಸನ ಮುಂತಾದುವುಗಳಲ್ಲಿ 'ತ್ರಿವರ್ಗ' ರೂಪವಾದ ಅರ್ಥವಿಲ್ಲದಿದ್ದರೂ ಬೀಜವು ರಸ ಗಳಿಗೆ ಕಾರಣವಾಗುತ್ತದೆ.

೩೮ ಮುಖಸಂಧಿಯ ಹನ್ನೆರಡು ಅಂಗಗಳು—

**ಉಪಕ್ಷೇಪಃ ಪರಿಕರಃ ಪರಿನ್ಯಾಸೋ ವಿಲೋಭನಂ || ೨೫ ||**

**ಯುಕ್ತಿಃ, ಪ್ರಾಪ್ತಿಃ, ಸಮಾಧಾನಂ, ವಿಧಾನಂ, ಪರಿಭಾವನಾ |**
**ಉದ್ಭೇದಭೇದಕರಣಾನ್ಯನ್ವರ್ಥಾನಿ ಯಥಾಕ್ರಮಂ || ೨೬ ||**

**ತಾ**—ಉಪಕ್ಷೇಪ, ಪರಿಕರ, ಪರಿನ್ಯಾಸ, ವಿಲೋಭನ, ಯುಕ್ತಿ, ಪ್ರಾಪ್ತಿ, ಸಮಾಧಾನ, ವಿಧಾನ, ಪರಿಭಾವನಾ, ಉದ್ಭೇದ, ಭೇದ, ಕರಣ, ಇವು ಅನ್ವರ್ಥ ಅಂದರೆ ಹೆಸರಿನಿಂದಲೇ ಅರ್ಥವಾಗುವವುಗಳು. ಆದರೂ ಸೌಲಭ್ಯಕ್ಕಾಗಿ ಅವುಗಳ ಲಕ್ಷಣಗಳನ್ನು ಹೇಳಲಾಗಿದೆ.

೩೯ ಬೀಜನ್ಯಾಸ ಉಪಕ್ಷೇಪಃ

**ತಾ**—ಬೀಜವನ್ನು ಇರಿಸುವುದು ಉಪಕ್ಷೇಪ.

ಉದಾ—ವೇ. ಲಾಕ್ಷಾಗೃಹಾನಲ ವಿಷಾನ್ನಸಭಾ ಪ್ರವೇಶೈಃ, ಪ್ರ.ಅಂ. ಶ್ಲೋಕ ೮

೪೦ ತದ್ಬಾಹುಲ್ಯಂ ಪರಿಕ್ರಿಯಾ.

ತಾ—ಬೀಜದ ಹೆಚ್ಚಳ (ದೃಢ ಪಡಿಸುವುದು) ಪರಿಕರ.

ಉದಾ—ಧೃತರಾಷ್ಟ್ರಸ್ಯತನಯಾನ್ ಕೃತವೈರಾನ್ ಪದೇ ಪದೇ, ವೇ. ಪ್ರ. ಅಂ. ಶ್ಲೋಕ ೯

೪೧ ತನ್ನಿಷ್ಪತ್ತಿಃ ಪರಿನ್ಯಾಸೋ.

ತಾ—ಪರಿಕರದ ಸಿದ್ಧಿಯು ಪರಿನ್ಯಾಸ.

ಉದಾ—ಪ್ರವೃದ್ಧಂಯದ್ವೈರಂ, ವೇ. ಪ್ರ. ಅಂ. ಶ್ಲೋ. ೧೦

೪೨ ಗುಣಾಖ್ಯಾನಂ ವಿಲೋಭನಂ.

ತಾ—ಫಲವನ್ನು ಕೊಡುವ ವಸ್ತುವಿನ ಗುಣವನ್ನು ವರ್ಣಿಸುವುದು.

ಉದಾ —ಮಂಥಾಯಸ್ತಾರ್ಣವಾಂಭಃಪ್ಲುತಕುಹರವಲನ್ಮಂದರಧ್ವಾನ ಧೀರಃ—ತಾಡಿತೋಽಯಂ ಎಂಬಲ್ಲಿಂದ ಯಶೋದುಂದುಭಿಃ ಎಂಬಲ್ಲಿಯವರೆಗೆ ವೇ. ಅಂ. ೧ ಶ್ಲೋ. ೨೨ ||

೪೩ ಯುಕ್ತಿಲಕ್ಷಣ—ಸಂಪ್ರಧಾರಣಮರ್ಥಾನಾಂ ಯುಕ್ತಿಃ.

ತಾ—ಪ್ರಯೋಜನಗಳ ಸರಿಯಾದ ನಿಶ್ಚಯ ಅಥವಾ ಸಮರ್ಥನೆ ಯುಕ್ತಿ.

ಉದಾ—ಯುಷ್ಮಾನ್ ಹ್ರೇಪಯತಿ ಕ್ರೋಧಾಲ್ಲೋಕೇ ಶತ್ರುಕುಲಕ್ಷಯಃ ವೇ. ಅಂ. ೧ ಶ್ಲೋಕ ೧೭

೪೪ ಪ್ರಾಪ್ತಿಃ ಸುಖಾಗಮಃ

ತಾ—ಸುಖ ಬರುವುದು ಪ್ರಾಪ್ತಿ.

ಉದಾ—ವೇ. ಜೇಟೀ—ಭಟ್ಟಿನಿ, ಪರಿಕುಪಿತ ಇವಕುಮಾರೋ ಲಕ್ಷ್ಯತೇ. ಎಂದುಪಕ್ರಮಿಸಿದಾಗ ಭೀಮನು ಹೇಳುತ್ತಾನೆ.

ಮಥ್ನಾಮಿ ಕೌರವಶತಂ ಸಮರೇ ನ ಕೋಪಾತ್ ದುಃಶಾಸನಸ್ಯರುಧಿರಂ ನಪಿಬಾಮ್ಯುರಸ್ತಃ । ಸಂಚೂರ್ಣಯಾಮಿಗದಯಾ ನ ಸುಯೋಧನೋರೂ ಸಂಧಿಂ ಕರೋತು ಭವತಾಂ ನೃಪತಿಃ ಪಣೇನ ವೇ. ಅಂ. ೧. ಶ್ಲೋ ೧೫ ದ್ರೌಪದೀ—ನಾಥ, ಅಶ್ರುತಪೂರ್ವಂ ಖಲ್ವೇತದ್ವಚನಂ, ತತ್ ಪುನಃ ಪುನರ್ಭಣ.

**೪೫ ಬೀಜಾಗಮಃ ಸಮಾಧಾನಂ.**

**ತಾ**—ಬೀಜದ ಆಗಮನ ಅಂದರೆ ಮೂಡಿ ಬರುವಿಕೆಯು ಸಮಾಧಾನ.

ಉದಾ—ಭೀಮಃ, ಭವತು ಪಾಂಚಾಲ ರಾಜತನಯೇ, ಶ್ರೂಯತಾ ಮಚಿರೇಣೈವ ಕಾಲೇನ.

ಚಂಚದ್ಭುಜಭ್ರಮಿತಚಂಡಗದಾಭಿಘಾತಸಂಚೂರ್ಣಿತೋರು ಯುಗಲಸ್ಯ ಸುಯೋಧನಸ್ಯ । ಸ್ತ್ಯಾನಾವನದ್ಧ ಘನಶೋಣಿತಶೋಣಪಾಣಿರುತ್ತಂ—ಸಯಿಷ್ಯತಿಕಚಾಂಸ್ತವ ದೇವಿ ಭೀಮಃ ವೇ. ಅಂ. ೧. ಶ್ಲೋ ೨೧. ಹೀಗೆ ಮುಡಿ ಕಟ್ಟುವ ಉದ್ದೇಶಕ್ಕೆ ಬೀಜದ ಪುನರುಪಾದಾನವು ಸಮಾಧಾನವು.

**೪೬ ವಿಧಾನಂ ಸುಖದುಃಖಕೃತ್.**

**ತಾ**—ಸುಖದುಃಖಗಳೆರಡನ್ನು ಉಂಟು ಮಾಡುವುದು ವಿಧಾನ.

ಉದಾ—ವೇ. ಅಂ. ೧. ದ್ರೌಪದೀ—ನಾಥ, ಅನ್ಯಚ್ಚ ಪುನರಪಿ ಯುಷ್ಮಾಭಿಃ ಆಗತ್ಯ ಅಹಂ ಸಮಾಶ್ವಾಸಯಿತವ್ಯಾ.

ಭೀಮ :—ನನು ಪಾಂಚಾಲ ರಾಜತನಯೇ, ಕಿಮದ್ಯಾಪ್ಯಲೀಕಾ ಶ್ವಾಸನಯಾ? ಭೂಯಃ ಪರಿಭವ ಕ್ಲಾಂತಿ ಲಜ್ಜಾ ವಿಧುರಿ ತಾನನಂ । ಅನಿಶ್ಶೇಷಿತ ಕೌರವ್ಯಂ ನ ಪಶ್ಯಸಿ ವೃಕೋದರಂ. ವೇ. ಅಂ ೧. ಶ್ಲೋ. ೨೬. ಇಲ್ಲಿ ಯುದ್ಧದ ಸುಖದುಃಖಗಳು ವಿಧಾನ.

**೪೭ ಪರಿಭಾವೋಽದ್ಭುತಾವೇಶಃ.**

**ತಾ**—ಅದ್ಭುತವಾದ ಆವೇಶವು ಪರಿಭಾವ (ನಾ)

ಉದಾ—ವೇ. ದ್ರೌ—ನಾಥ ಕಿಮಿದಾನೀಮೇಷಃ, ಪ್ರಲಯಜಲಧರಸ್ತನಿತ ಮಾಂಸಲಃ ಕ್ಷಣೇಕ್ಷಣೇ ಸಮರದುಂದುಭಿಸ್ತಾಡ್ಯತೇ. ವೇ. ಅಂ. ೧. ಇಲ್ಲಿ ಲೋಕೋತ್ತರವಾದ ಸಮರದುಂದುಭಿಯ ಧ್ವನಿಯಿಂದ ಉಂಟಾಗುವವಿಸ್ಮಯದ ರಸಾವೇಶವುಪರಿಭಾವನಾ (ಮೂಲದಲ್ಲಿ ಪರಿಭಾವನಾ ಎಂಬುದು ಇಲ್ಲಿ ಸಂಕ್ಷಿಪ್ತ ವಾಗಿ ಪರಿಭಾವ ಎಂದಾಗಿದೆ.)

**೪೮ ಉದ್ಭೇದೋ ಗೂಢಭೇದನಂ.**

ತಾ—ರಹಸ್ಯವನ್ನು ಭೇದಿಸುವುದು ಉದ್ಭೇದ.

ಉದಾ—ವೇಣೀ. ಆರ್ಯಕಿಮಿದಾನೀಮಧ್ಯವಸ್ಯತಿ ಗುರುಃ. ನೇಪಥ್ಯೇ ಯತ್ಸತ್ಯವ್ರತಭಂಗಭೀರುಮನಸಾ....ಯೌಧಿಷ್ಠಿರಂ ಜೃಂಭತೇ. ಪ್ರ. ಅಂ. ೧. ಶ್ಲೋ. ೨೪. ಇಲ್ಲಿ ದ್ರೌಪದಿಯ ಕೇಶಬಂಧನದ ಉದ್ದೇಶಕ್ಕೆ ಹೊಂದಿ ಧರ್ಮ ರಾಜನ ಕ್ರೋಧವು ಪ್ರಕಟವಾಗಿರುವುದರಿಂದ ಉದ್ಭೇದವು.

**೪೯ ಕರಣಂ ಪ್ರಕೃತಾರಂಭಃ.**

ತಾ—ಪ್ರಸ್ತುತ ವಿಷಯವನ್ನು ಆರಂಭಿಸುವುದು ಕರಣವು.

ಉದಾ—ವೇ. ಭೀಮಃ—ತತ್ ಪಾಂಚಾಲಿ, ಗಚ್ಛಾಮೋ ವಯಮಿದಾನೀಂ ಕುರುಕುಲಕ್ಷಯಾಯ. ವೇ.ಅಂ.೧ ಸಹದೇವಃ—ಆರ್ಯ, ಗಚ್ಛಾಮ ಇದಾನೀಂ ಗುರುಜನಾನುಜ್ಞಾತಾಃ ವಿಕ್ರಮಾನುರೂಪಮಾಚರಿತುಂ. ಇಲ್ಲಿ ಮುಂದಿನ ಅಂಕದಲ್ಲಿ ಬರಲಿರುವ ಯುದ್ಧದ ಆರಂಭವು ಸೂಚಿತವಾಗಿದೆ.

**೫೦ ಭೇದಃ ಪ್ರೋತ್ಸಾಹನಾ ಮತಾ.**

**ತಾ**—ಪ್ರೋತ್ಸಾಹವನ್ನುಂಟು ಮಾಡುವುದು ಭೇದ.

ಉದಾ—ನಾಥ, ಮಾಖಲುಯಾಜ್ಞಸೇನೀ ಪರಿಭವೋದ್ದೀಪಿತ ಕೋಪಾನಲಾ ಅನಪೇಕ್ಷಿತಶರೀರಾಃ ಪರಿಕ್ರಮಿಷ್ಯಥ. ಯತಃ ಅಪ್ರಮತ್ತಸಂಚರಣೀಯಾನಿ

ರಿಪುಬಲಾನಿ ಶ್ರೂಯಂತೇ. ಭೀಮ :—ಅಯಿಸುಕ್ಷತ್ರಿಯೇ ಅನ್ಯೋನ್ಯಾಸ್ಫಾಲಭಿನ್ನ....ಪಂಡಿತಾಃ ಪಾಂಡುಪುತ್ರಾಃ || ವೇ. ಅಂ. ೧. ಶ್ಲೋ. ೨೭. ಇಲ್ಲಿ ವಿಷಣ್ಣಳಾದ ದ್ರೌಪದಿಗೆ ಕ್ರೋಧೋತ್ಸಾಹ ಬೀಜಕ್ಕೆ ಅನುಗುಣವಾಗಿ ಪ್ರೋತ್ಸಾಹವನ್ನು ಕೊಡುವುದು ಭೇದ.

ಹೀಗೆ ಹೇಳಲಾದ ಹನ್ನೆರಡು ಅಂಗಗಳು ಅರ್ಥ ಪ್ರಕೃತಿಗಳಲ್ಲಿ ಮೊದಲನೆಯದಾದ 'ಬೀಜ'ವ ಮತ್ತು ಅವಸ್ಥೆಗಳಲ್ಲಿ 'ಆರಂಭ'ದ ದ್ಯೋತಕಗಳಾಗಿವೆ. ಇವುಗಳಲ್ಲಿ ಉಪಕ್ಷೇಪ, ಪರಿಕರ, ಪರಿನ್ಯಾಸ, ಯುಕ್ತಿ, ಉದ್ಭೇದ, ಸಮಾಧಾನ ಈ ಆರನ್ನು ಅವಶ್ಯ ಪ್ರಯೋಗಿಸತಕ್ಕದ್ದು.

## ಪ್ರತಿಮುಖಸಂಧಿ

**೫೧ ಪ್ರತಿಮುಖಸಂಧಿ ಲಕ್ಷಣ—**

**ಲಕ್ಷ್ಯಾಲಕ್ಷ್ಯತಯೋದ್ಭೇದಸ್ತಸ್ಯ ಪ್ರತಿಮುಖಂ ಭವೇತ್**
**ಬಿಂದು ಪ್ರಯತ್ನಾನುಗಮಾದಂಗಾನ್ಯಸ್ಯತ್ರಯೋದಶ || ೩೦ ||**

**ಅನ್ವ**—ತಸ್ಯ=ಆ ಬೀಜದ, **ಲಕ್ಷ್ಯಾಲಕ್ಷ್ಯತಯಾ**=ಹಲವು ಬಾರಿ ಕಂಡು ಮತ್ತು ಹಲವು ಬಾರಿ ಕಾಣದೆ, ಉದ್ಭೇದಃ=ಪ್ರಕಟವಾಗುವಿಕೆಯು, **ಪ್ರತಿಮುಖಂ**=ಪ್ರತಿಮುಖವು, ಭವೇತ್=ಆಗುತ್ತದೆ. ಬಿಂದುಪ್ರಯತ್ನಾನುಗಮಾತ್=ಬಿಂದು ಪ್ರಯತ್ನಗಳ ಹೊಂದಿಕೆಯಿಂದ, ಅಸ್ಯ=ಈ ಪ್ರತಿಮುಖಸಂಧಿಗೆ, ತ್ರಯೋದಶ ಅಂಗಾನಿ=ಹದಿಮೂರು ಅಂಗಗಳು.

ಉದಾ—ವೇಣೀಸಂಹಾರದ ಎರಡನೆಯ ಅಂಕದಲ್ಲಿ ಧರ್ಮರಾಜನ ಕ್ರೋಧಬೀಜವು ಭೀಷ್ಮಾದಿಗಳ ಮರಣದಿಂದ ಸ್ವಲ್ಪ ಲಕ್ಷ್ಯವೂ, ಕರ್ಣಾದಿಗಳು ಬದುಕಿರುವುದರಿಂದ ಸ್ವಲ್ಪ ಅಲಕ್ಷ್ಯವೂ ಆಗಿ ಪ್ರಕಟವಾಗಿದೆ. 'ಸಹಭೃತ್ಯಗಣಂ ಸಬಾಂಧವಂ....ನಚಿರಾತ್ ಪಾಂಡುಸುತಃ ಸುಯೋಧನಂ | ದುಶ್ಶಾಸನಸ್ಯ ಹೃದಯ ಕ್ಷತಜಾಂಬುಪಾನೇ....ಜಯದ್ರಥವಧೇಽಪಿ ತಥಾ ಪ್ರತಿಜ್ಞಾ || ಈ ಶ್ಲೋಕಗಳಿಂದ ವ್ಯಕ್ತವಾದ ಬೀಜದ ಉದ್ಭೇದವು ಪ್ರತಿಮುಖಸಂಧಿ.

ಮೊದಲನೆಯ ಅಂಕದಲ್ಲಿ ಸ್ಥಾಪಿತವಾದ ಬೀಜವು, 'ಬಿಂದು' ಎಂಬ ಅರ್ಥ ಪ್ರಕೃತಿ ಮತ್ತು 'ಪ್ರಯತ್ನ'ವೆಂಬ ಅವಸ್ಥೆಗಳ ಯೋಜನೆಯಿಂದ ಪ್ರತಿಮುಖ ಸಂಧಿಗೆ ಹದಿಮೂರು ಅಂಗಗಳಾಗುತ್ತವೆ.

೫೨ ಪ್ರತಿಮುಖಸಂಧಿಯ ಹದಿಮೂರು ಅಂಗಗಳು—

**ವಿಲಾಸಃ ಪರಿಸರ್ಪಶ್ಚ ವಿಧೂತಂ ಶಮನರ್ಮಣೀ ।**
**ನರ್ಮದ್ಯುತಿಃ ಪ್ರಗಮನಂ ನಿರೋಧಃ ಪರ್ಯುಪಾಸನಂ ॥ ೩೦ ॥**
**ವಜ್ರಂ ಪುಷ್ಪಮುಪನ್ಯಾಸೋ ವರ್ಣಸಂಹಾರ ಇತ್ಯಪಿ.**

ವಿಲಾಸ, ಪರಿಸರ್ಪ, ವಿಧೂತ, ಶಮ, ನರ್ಮ, ನರ್ಮದ್ಯುತಿ, ಪ್ರಗಮನ, ನಿರೋಧ, ಪರ್ಯುಪಾಸನ, ವಜ್ರ, ಪುಷ್ಪ, ಉಪನ್ಯಾಸ, ವರ್ಣಸಂಹಾರ,ಇವು ಹದಿಮೂರು ಪ್ರತಿಮುಖಸಂಧಿಯ ಅಂಗಗಳು.

೫೩ **ರತ್ಯರ್ಥೇಹಾ ವಿಲಾಸಃ ಸ್ಯಾತ್ ।**

ತಾ—ರತಿಸುಖದ ಇಚ್ಛೆಯು 'ವಿಲಾಸ'ವಾಗಿದೆ.

ಉದಾ—ವೇಣೀ. ವಿನಯಂಧರ ಅಪ್ಯಖಿಲು ಭಾನುಮತೀ....ಯತ್ರಸ್ಥಾ ಭಾನುಮತೀ. ವೇ. ಅಂ. ೨.

೫೪ **ದೃಷ್ಟನಷ್ಟಾನುಸರ್ಪಣಂ** ॥ ೩೨ ॥

**ಪರಿಸರ್ಪೋ**

ತಾ—ಒಮ್ಮೆ ಕಂಡು ಮತ್ತೊಮ್ಮೆ ಕಳೆದು ಹೋಗಿರುವುದನ್ನು ಅರಸುವುದು ಪರಿಸರ್ಪ.

ಉದಾ—ಯೋsಯಮುದ್ಯತೇಷುಬಲವತ್ಸು । ಆಶಸ್ತ್ರಗ್ರಹಣಾತ್.... ಅಭಿಮನ್ಯೋರ್ವಧಾತ್ ॥ ವೇ. ಅಂ. ೨. ಶ್ಲೋ. ೨.

ಕಂಚುಕಿ ಹೇಳುವ ಈ ಮಾತಿನಲ್ಲಿ ಭೀಷ್ಮಾದಿಗಳ ವಧದಿಂದ ದೃಷ್ಟವಾಗಿ

ಅನಂತರ ಅಭಿಮನ್ಯು ವಧದಿಂದ ಬೀಜವು ನಷ್ಟವಾಯಿತು. ಆದರೆ ವಾಸು ದೇವನ ಸಹಾಯವುಳ್ಳ ಬಲಿಷ್ಠರಾದ ಪಾಂಡವರು ಸಂಗ್ರಾಮವನ್ನು ಪ್ರಾರಂಭಿಸಿರು ವುದರಿಂದ ಬಿಂದು ಬೀಜ ಪ್ರಯತ್ನಗಳಿಗೆ ಹೊಂದಿ ಕಂಚುಕಿಯ ಮಾತಿನಲ್ಲಿ ಮತ್ತೆ ಬೀಜದ ಅನುಸರಣವು ಕಂಡು ಬಂದಿದೆ.

**೩೩ ವಿಧೂತಂ ಸ್ಯಾದರತಿಃ.**

**ತಾ**—ನಿರಾಶೆ ಅಥವಾ ದುಃಖಭಯಗಳಿಂದ ಉಂಟಾಗುವ ಅನಾಸ್ಥೆಗೆ ಅರತಿಯೆಂದು ಹೆಸರು.

ಉದಾ—ವೇ. ಅಂಕ ೨. ಭಾನುಮತಿಯ ದುಸ್ಸ್ವಪ್ನದರ್ಶನ, ದುರ್ಯೋಧನನ ಅನಿಷ್ಟಶಂಕೆ ಮತ್ತು ಪಾಂಡವವಿಜಯಶಂಕೆ ಇವುಗಳಿಂದ ಉಂಟಾಗುವ ರತಿಯ ಅನಾಸ್ಥೆಯು ಅರತಿಯು. ಸಖಿ ಭಾನುಮತಿ....ತತಃ ಪ್ರವಿಶತಿ ದುರ್ಯೋಧನಃ ಕಂಚುಕೀ ಚ.

**೩೬ ತಚ್ಛಮಃ ಶಮಃ.**

**ತಾ**—ಅರತಿಯ ಪರಿಹಾರವು 'ಶಮ'.

ಉದಾ—ವೇ–ದೇವತಾ ಸಂಕೀರ್ತನೇನ ಚ ಪರಿಹರಿಷ್ಯಾವಃ. ವೇ. ಅಂ. ೨

**೩೭ ಪರಿಹಾಸವಚೋನರ್ಮ.**

**ತಾ**—ಪರಿಹಾಸ ಪೂರ್ಣವಾದ ಮಾತುಗಳು 'ನರ್ಮ'.

ಉದಾ—ವೇಣೀ. ರಾಜೋಪಸೃತ್ಯ....ಭೂಮಾವಪಾತಯತಿ ದೇವಿ. ಇಲ್ಲಿ ದುಸ್ಸ್ವಪ್ನ ದರ್ಶನದ ಶಾಂತಿಗಾಗಿ ದೇವ ಪೂಜೆಯನ್ನು ಕೈಕೊಂಡ ಭಾನುಮತಿಗೆ ದುರ್ಯೋಧನನ ಪರಿಹಾಸವು ಕಂಡು ಬರುತ್ತಿದೆ.

**೩೮ ಧೃತಿಸ್ತಜ್ಜಾದ್ಯುತಿರ್ಮತಾ.**

**ತಾ**—ಪರಿಹಾಸದಿಂದ ಹುಟ್ಟಿದ ಧೈರ್ಯವು 'ನರ್ಮದ್ಯುತಿ'.

ಉದಾ—ಕಿಂ ಕಂಠೇ ಶಿಥಿಲೀಕೃತಃ....ಯೋಗ್ಯೇಮಯಿ. ವೇ. ಅಂ. ೨. ಶ್ಲೋ. ೯.

## ೫೯ ಉತ್ತರಾವಾಕ್ಪ್ರಗಮನಂ.

ಪಾತ್ರಗಳಲ್ಲಿ ಪರಸ್ಪರ ನಡೆಯುವ ಬೀಜಕ್ಕೆ ಸಹಾಯಕವಾಗುವ ನುಡಿ, ಮರುನುಡಿಗಳಿಗೆ (ಉಕ್ತಿ—ಪ್ರತ್ಯುಕ್ತಿ) ಪ್ರಗಮನ ಅಥವಾ ಪ್ರಗಮ ಎಂದು ಹೆಸರು. ವೇಣೀ. ವಿಕಿರಧವಲ....ಸ್ಪೃಶಾಸ್ಮಾನ್. ಅಂ ೨. ಶ್ಲೋ. ೧೬.

## ೬೦ ಹಿತರೋಧೋ ನಿರೋಧನಂ.

ತಾ— ಹಿತಕ್ಕೆ ತಡೆಯುಂಟಾಗುವುದು ನಿರೋಧನ.

## ೬೧ ಪರ್ಯುಪಾಸ್ತಿರನುನಯಃ.

ತಾ—ನಿರೋಧನದ ನಿವಾರಣೆಗಾಗಿ ಇನ್ನೊಬ್ಬರನ್ನು ಒಲಿಸಿಕೊಳ್ಳುವುದು ಪರ್ಯುಪಾಸನ.

## ೬೨ ಪುಷ್ಪಂ ವಾಕ್ಯಂ ವಿಶೇಷವತ್.

ತಾ—ವಿಶೇಷವಾದ ಮಾತನ್ನಾಡುವುದರಿಂದ ಬೀಜೋದ್ಘಾಟನವಾದರೆ 'ಪುಷ್ಪ'. ರೇಣುರ್ಬಾಧಾಂ ವಿಧತ್ತೇ....ಕರೋತಿ || ಅಂ. ೨. ಶ್ಲೋ. ೨೨. ಲೋಲಾಂಶುಕಸ್ಯ....ಮಮೋರುಯುಗ್ಮಂ || ಶ್ಲೋ. ೨೩.

## ೬೩ ಉಪನ್ಯಾಸಸ್ತು ಸೋಪಾಯಂ.

ತಾ—ಮಾತು ಉಪಾಯಸಹಿತವಾಗಿದ್ದರೆ ಅದು 'ಉಪನ್ಯಾಸ' ಎಂಬ ಸಂಧ್ಯಂಗವಾಗುತ್ತದೆ.

ಉದಾ — ಪ್ರೇಮಾಬದ್ಧಸ್ತಿಮಿತನಯನಾಪೀಯಮಾನಾಬ್ಜ .... ಕಿಂನ ದುರ್ಯೋಧನಸ್ಯ || ಅಂ. ೨. ಶ್ಲೋ. ೧೮.

## ೬೪ ವಜ್ರಂ ಪ್ರತ್ಯಕ್ಷಂನಿಷ್ಠುರಂ.

ತಾ—ಪ್ರತ್ಯಕ್ಷವಾಗಿಯೇ ಒಬ್ಬನ ಎದುರಿನಲ್ಲಿ ಆಡುವ ನಿಷ್ಠುರವಚನಕ್ಕೆ 'ವಜ್ರ' ಎಂದು ಹೆಸರು.

ಉದಾ—ವೇ. ತದ್ಭಿರುತ್ಪಂ ತವ...ಕುಲೇ ಜನ್ಮ ಕೌಲೀನಮೇತತ್. ಅಂ ೨ ಶ್ಲೋ. ೧೧.

**೭೫ ಚಾತುರ್ವರ್ಣ್ಯೋಪಗಮನಂ ವರ್ಣಸಂಹಾರ ಇಷ್ಯತೇ ||೩೫||**

ತಾ—ಬ್ರಾಹ್ಮಣಾದಿ ನಾಲ್ಕುವರ್ಣಗಳ ಜನರು ಏಕತ್ರ ಸೇರುವುದಕ್ಕೆ 'ವರ್ಣಸಂಹಾರ' ಎಂದು ಹೆಸರು. (ಬೇರೆ ಬೇರೆ ಪಾತ್ರಗಳು ಒಂದೆಡೆ ಸೇರಿದರೂ ವರ್ಣ ಸಂಹಾರ.)

## ಗರ್ಭಸಂಧಿ ಮತ್ತು ಅದರ ಅಂಗಗಳು

**೭೬ ಗರ್ಭಸಂಧಿಲಕ್ಷಣ—**

**ಗರ್ಭಸ್ತು ದೃಷ್ಟನಷ್ಟಸ್ಯ ಬೀಜಸ್ಯಾನ್ವೇಷಣಂ ಮುಹುಃ |**
**ದ್ವಾದಶಾಂಗಃ ಪತಾಕಾಸ್ಯಾನ್ನವಾ ಸ್ಯಾತ್ ಪ್ರಾಪ್ತಿಸಂಭವಃ**
**|| ೩೬ ||**

ಅನ್ವ—ದೃಷ್ಟನಷ್ಟಸ್ಯ=ಒಮ್ಮೆ ಕಂಡು ಮತ್ತೊಮ್ಮೆ ಅಡಗಿ ಹೋಗುವ, ಬೀಜಸ್ಯ=ಬೀಜದ, ಮುಹುಃ=ಮತ್ತೂ ಮತ್ತೂ, ಅನ್ವೇಷಣಂ ತು = ಹುಡುಕುವಿಕೆಯಾದರೋ, ಗರ್ಭಃ=ಗರ್ಭಸಂಧಿಯಾಗಿರುತ್ತದೆ. (ಸಃ=ಅದು) ದ್ವಾದಶಾಂಗಃ=ಹನ್ನೆರಡು ಅಂಗಗಳುಳ್ಳದ್ದು. (ತತ್ರ = ಅಲ್ಲಿ) ಪತಾಕಾ ಸ್ಯಾನ್ನವಾ=ಪತಾಕೆ ಇದ್ದರೂ ಇರಬಹುದು. ಪ್ರಾಪ್ತಿಸಂಭವಃ=ಪ್ರಾಪ್ತಿ ಸಂಭವವು (ಸ್ಯಾದೇವ=ಇದ್ದೇ ಇರುತ್ತದೆ.) ದ್ರೋಣವಧದಿಂದ ದೃಷ್ಟವಾದ ಮತ್ತು ಅಶ್ವತ್ಥಾಮಾದಿಗಳ ರೌದ್ರಾವೇಶದಿಂದ ನಷ್ಟವಾದ ಬೀಜವನ್ನು ಪುನಃ ಪುನಃ ಹುಡುಕುವುದರಿಂದ ವೇಣೀ ಸಂಹಾರದಲ್ಲಿ ಗರ್ಭಸಂಧಿಯು ಬಂದಿದೆ.

**೭೭ ಗರ್ಭಸಂಧಿಯ ಹನ್ನೆರಡು ಅಂಗಗಳು—**

**ಅಭೂತಾಹರಣಂ ಮಾರ್ಗೋ ರೂಪೋದಾಹರಣೇ ಕ್ರಮಃ |**
**ಸಂಗ್ರಹಶ್ಚಾನುಮಾನಂಚ ತೋಟಕಾಧಿಬಲೇ ತಥಾ || ೩೭ ||**
**ಉದ್ವೇಗಸಂಭ್ರಮಾಕ್ಷೇಪಾ ಲಕ್ಷಣಂಚ ಪ್ರಣೀಯತೇ |**

೧೮ ಅಭೂತಾಹರಣಂ ಛದ್ಮ.

ತಾ—ಛದ್ಮ ಎಂದರೆ ಕಪಟವನ್ನು ಪ್ರದರ್ಶಿಸಿದರೆ ಅಭೂತಾಹರಣವು.

ಉದಾ—ಅಶ್ವತ್ಥಾಮಾ ಹತ ಇತಿ....ತುಲ್ಯಂ ಮುಮೋಚ. ವೇ. ಅಂ ೩. ಶ್ಲೋ. ೧೧.

೧೯ ಮಾರ್ಗಸ್ತತ್ತ್ವಾರ್ಥಕೀರ್ತನಂ.

ತಾ—ಅರ್ಥಪ್ರಾಪ್ತಿರೂಪವಾದ ನಿಶ್ಚಿತವಾದ ವಿಷಯವನ್ನು ಹೇಳುವುದು ಮಾರ್ಗ.

೨೦ ರೂಪಂ ವಿತರ್ಕವದ್ವಾಕ್ಯಂ.

ತಾ—ತರ್ಕವಿತರ್ಕಮಯವಾದ ವಾಕ್ಯವನ್ನು ಪ್ರಯೋಗ ಮಾಡಿದಾಗ 'ವಿತರ್ಕ' ಎಂಬ ಅಂಗವು.

ಉದಾ—ವೇ. ಕಿಂ ಶಿಷ್ಯಾದ್ಗುರುದಕ್ಷಿಣಾಂ....ಚತುರ್ಥಾದಹಂ ಅಂ. ೩. ಶ್ಲೋ. ೯.

೨೧ ಸೋತ್ಕರ್ಷಂ ಸ್ಯಾದುದಾಹೃತಿಃ.

ತಾ—ಉತ್ಕರ್ಷದಿಂದ (ಅತಿಶಯ) ಕೂಡಿದ ಮಾತನ್ನಾಡುವುದು.

ಉದಾ—ವೇಶಃ ಸೋऽಯಮರಾತಿ....ಕ್ರೋಧನಃ. ವೇ.ಅಂ ೩ ಶ್ಲೋ.೩೩

೨೨ ಕ್ರಮಃ ಸಂಚಿಂತ್ಯಮಾನಾಪ್ತಿಃ.

ತಾ—ತುಂಬಾ ಯೋಚಿಸುತ್ತಿರುವ ಅರ್ಥವು ಪ್ರಾಪ್ತವಾದರೆ ಕ್ರಮ.

೨೩ ಭಾವಜ್ಞಾನಮಥಾಪರೇ.

ತಾ—'ಇನ್ನೊಬ್ಬರ ಮನಸ್ಸಿನ ಅಭಿಪ್ರಾಯವನ್ನು ತಿಳಿದುಕೊಳ್ಳುವುದು ಕ್ರಮ' ಎಂದು ಕೆಲವರ ಮತ.

೨೪ ಸಂಗ್ರಹಃ ಸಾಮದಾನೋಕ್ತಿಃ.

ತಾ—ನಾಯಕಾದಿಗಳಿಗೆ ಅನುಕೂಲವಾಗಿ ನಡೆದುಕೊಳ್ಳುವವರನ್ನು ಸಾಮ ಅಥವಾ ದಾನದ ಉಕ್ತಿಗಳಿಂದ ಪ್ರಸನ್ನಗೊಳಿಸುವುದು ಸಂಗ್ರಹ.

ಉದಾ—ವೇ. ವತ್ಸ ಯಾವದಯಂ ಸಂಸಾರಃ....ಅನುವರ್ತನೀಯಾ ಇತಿ.

**೭೫ ಅಭ್ಯೂಹೋ ಲಿಂಗತೋಽನುಮಾ.**

ತಾ—ಯಾವುದಾದರೊಂದು ಚಿಹ್ನೆಯ ಆಧಾರದಿಂದ ಒಂದು ವಿಷಯ ವನ್ನು ಊಹಿಸುವುದು ಅನುಮಾನ.

ಉದಾ—ವೇಣೀ. ಏತದರ್ಥಂ ಚ ಕೌರವ ಪಾಂಡವ....ಉಪೇಕ್ಷಾಕೃತಾ. ವೇ. ಅಂ. ೩.

**೭೬ ಅಧಿಬಲಮಭಿಸಂಧಿಃ.**

ತಾ—ಚಾತುರ್ಯದಿಂದ ಮಾಡುವ ಮೋಸವು ಅಧಿಬಲ. (ಇಷ್ಟ ಜನಾತಿಸಂಧಾನಂ ಅಧಿಬಲಂ ಪ್ರ. ರು.)

ಉದಾ—ವೇ. ಕೃಷ್ಣಾಯೇನ....ಸಂರಕ್ಷ್ಯತಾಂ ಕೌರವಾಃ ಅಂ. ೩. ಶ್ಲೋ. ೪೭. ಸಕಲರಿಪುಜಯಾಶಾ....ಪಾಂಡವೋಽಯಂ ಅಂ. ೫. ಶ್ಲೋ. ೨೭.

**೭೭ ಸಂರಬ್ಧಂ ತೋಟಕಂ ವಚಃ.**

ತಾ—ರೋಷ ಅಥವಾ ಕ್ಷೋಭದಿಂದ ಕೂಡಿದ ಮಾತು ತೋಟಕ.

ಉದಾ—ಪ್ರಯತ್ನ ಪರಿಬೋಧಿತಃ....ಭಾರೋಭುವಃ ಅಂ.೫. ಶ್ಲೋ. ೩೪ ಎಂಬಲ್ಲಿಂದ ಧೃತಾಯುಧೋ....ಕೇನ ಸೇತ್ಸ್ಯತಿ ॥ ವರೆಗೆ ವೇ. ಅಂ. ೩. ಶ್ಲೋ. ೪೬.

**೭೭(ಅ) ತೋಟಕಸ್ಯಾನ್ಯಥಾಭಾವಂ ಬ್ರುವತೇಽಧಿಬಲಂಬುಧಾಃ.**

ತಾ—ಕೆಲವು ಪಂಡಿತರು ತೋಟಕಕ್ಕೆ ವಿರುದ್ಧವಾದ ಭಾವವನ್ನು ಅಧಿಬಲವೆನ್ನುತ್ತಾರೆ.

**೭೭(ಆ) ಸಂರಬ್ಧವಚನಂ ಯತ್ತು ತೋಟಕಂ ತದುದಾಹೃತಂ**

॥ ೪೧ ॥

ತಾ—ರೋಷದ (ಅಥವಾ ಮಾನಸಿಕ ಕ್ಷೋಭದ) ಮಾತು ಯಾವುದೋ ಅದು ತೋಟಕವೆಂದು ಉದಾಹೃತವಾಗಿದೆ.

ಉದಾ—ವೇಣೀ. ರಾಜಾ ಅಯೇ ಸುಂದರಕ ! ಕಚ್ಚಿತ್ ಕುಶಲಮಂಗ ರಾಜಸ್ಯ....ತದಲಂ ಸಂಭ್ರಮೇಣ. ಅಂ. ೫.

೭೮ ಉದ್ವೇಗೋಽರಿಕೃತಾ ಭೀತಿಃ.

ತಾ—ಶತ್ರುಗಳಿಂದ ಉಂಟಾದ ಭೀತಿಯೇ ಉದ್ವೇಗ.

ಉದಾ—ವೇಣೀ. ಸೂತಃ (ಶ್ರುತ್ವಾ ಸಭಯಂ) ಕಥಮಾಸನ್ನ ಏವಾಸೌ....ಅನಾರ್ಯಮಾಚರಿಷ್ಯತಿ. ಅಂ. ೫. ಶತ್ರುವಿನಿಂದ ಉಂಟಾದ ಈ ಭೀತಿಯು ಉದ್ವೇಗ.

೭೯ ಶಂಕಾತ್ರಾಸೌ ಚ ಸಂಭ್ರಮಃ.

ತಾ—ಸಂಶಯ ಮತ್ತು ಭಯಗಳುಂಟಾದರೆ ಅದು 'ಸಂಭ್ರಮ' ಎನ್ನಿಸುತ್ತದೆ.

ಉದಾ—ವೇಣೀ. (ನೇಪಥ್ಯೇ ಕಲಕಲಃ) ಅಶ್ವತ್ಥಾಮಾ-(ಸಸಂಭ್ರಮಂ) ಮಾತುಲ, ಮಾತುಲ, ಕಷ್ಟಂಕಷ್ಟಂ ಏಷಭ್ರಾತುಃ....ದುಃಶಾಸನಸ್ಯಭೀಮೇನ– ಅಂ. ೩. ಶ್ಲೋ. ೪೮.

೮೦ ಗರ್ಭಬೀಜಸಮುದ್ಭೇದಾದಾಕ್ಷೇಪಃ ಪರಿಕೀರ್ತಿತಃ.

ತಾ—ಗರ್ಭಸಂಧಿಯ ಬೀಜವು ವಿಶೇಷವಾಗಿ ಪ್ರಕಟಗೊಂಡರೆ ಅದು ಆಕ್ಷೇಪವು.

ಉದಾ—ವೇಣೀ. ಸುಂದರಕಃ—ಅಥವಾ ಕಿಮತ್ರದೈವಮುಪಾಲಭೇ.... ಫಲಂ ಪರಿಣಮತಿ. ಅಂ. ೫. ಇಲ್ಲಿ ಫಲೋನ್ಮುಖವಾದ ಬೀಜಪ್ರಕಟವಾಗಿದೆ.

ಈ ಹನ್ನೆರಡು ಗರ್ಭಾಂಗಗಳು ಪ್ರಾಪ್ತ್ಯಾಶೆಯನ್ನು ಪ್ರದರ್ಶಿಸುವಂತೆ ಯೋಜನೆ ಹೊಂದಬೇಕು. ಇವುಗಳಲ್ಲಿ ಅಭೂತಾಹರಣ, ಮಾರ್ಗ, ತೋಟಕ,

ಅಧಿಬಲ, ಆಕ್ಷೇಪ ಇವು ಮುಖ್ಯ. ಉಳಿದುವನ್ನು ಯಥಾವಕಾಶ ಯೋಜಿಸ ಬಹುದು.

## ಅವಮರ್ಶಸಂಧಿ ಮತ್ತು ಅದರ ಅಂಗಗಳು

೮೧ ಅವಮರ್ಶಸಂಧಿಲಕ್ಷಣ.

ಕ್ರೋಧೇನಾವಮೃಶೇದ್ಯತ್ರ ವ್ಯಸನಾದ್ವಾ ವಿಲೋಭನಾತ್ ।
ಗರ್ಭನಿರ್ಭಿನ್ನಬೀಜಾರ್ಥಃ ಸೋಽವಮರ್ಶ ಇತಿಸ್ಮೃತಃ ॥ ೪೩ ॥

ತಾ—ಕೋಪದಿಂದ, ವ್ಯಸನದಿಂದ, ಅಥವಾ ಲೋಭದಿಂದ ಫಲಪ್ರಾಪ್ತಿಯ ವಿಷಯವಾಗಿ ಎಲ್ಲಿ ಪರ್ಯಾಲೋಚನೆಯು ನಡೆಯುತ್ತದೆಯೋ ಮತ್ತು ಗರ್ಭ ಸಂಧಿಯ ಮೂಲಕ ಪ್ರಕಟವಾದ ಬೀಜದ ಆ ಭಾಗಕ್ಕೆ ಅವಮರ್ಶಸಂಧಿಯೆಂದು ಹೆಸರು. ಚೆನ್ನಾಗಿ ಪರ್ಯಾಲೋಚಿಸುವುದು ಅವಮರ್ಶನ, ಅದು ಉಳ್ಳದ್ದು 'ಅವಮರ್ಶ'.

ಉದಾ—ವೇಣೀ. ದುರ್ಯೋಧನನ ರಕ್ತದಿಂದ ತೊಯ್ದು ಭೀಮನು ಬರುವ ಪರ್ಯಂತ. ತೀರ್ಣೇ ಭೀಷ್ಮಮಹೋದಧೌ....ವಾಚಾಸವಮಾರೋಪಿತಾಃ ಅಂ. ೬. ಶ್ಲೋ. ೧. ಇಲ್ಲಿ ಭೀಷ್ಮಾದಿ ಮಹಾರಥಿಕರ ಪರಾಜಯ, ವಧಗಳಿಂದ ನಿಶ್ಚಿತವಾದ ವಿಜಯದ ಪರ್ಯಾಲೋಚನ ನಡೆದಿದೆ. ಇದು 'ಅವಮರ್ಶಸಂಧಿ'.

೮೨ ಅವಮರ್ಶಸಂಧಿಯ ಅಂಗಗಳು—

ತತ್ರಾಪವಾದಸಂಫೇಟೌ ವಿದ್ರವದ್ರವಶಕ್ತಯಃ ।
ದ್ಯುತಿಃ ಪ್ರಸಂಗಶ್ಛಲನಂ ವ್ಯವಸಾಯೋ ವಿರೋಧನಂ ॥ ೪೪ ॥
ಪ್ರರೋಚನಾವಿಚಲನಮಾದಾನಂ ಚ ತ್ರಯೋದಶ ।

೮೩ ದೋಷಪ್ರಖ್ಯಾಪವಾದಃಸ್ಯಾತ್.

ತಾ—ದೋಷವನ್ನು ಎತ್ತಿ ಹೇಳುವುದು ಅಪವಾದ.

ಉದಾ—ವೇಣೀ. ಯುಧಿಷ್ಠಿರಃ—ಭದ್ರಪಾಂಚಾಲಕ, ಕಚ್ಚಿದಾಸಾದಿತಾ ಪದವೀ....ಉಪಲಬ್ಧಿಃ. ಅಂ. ೬. ಇಲ್ಲಿ ದುರ್ಯೋಧನನ ಪದವನ್ನು ಎತ್ತಿ ಹೇಳುವುದು ಅಪವಾದ.

೮೪ ಸಂಫೇಟೋ ರೋಷಭಾಷಣಂ.

ತಾ—ರೋಷದ ಮಾತು ಸಂಫೇಟ.

ಉದಾ—ವೇಣೀ. ಅಯಿಭೋಃ ಕೌರವರಾಜಕೃತಂ ಬಂಧುನಾಶದರ್ಶನ.... ಪ್ರಿಯಸಾಹಸಃ. ಅಂ. ೬. ಶ್ಲೋ. ೧೧. ಇಲ್ಲಿ ಪರಸ್ಪರಕ್ರೋಧ, ತಿರಸ್ಕಾರ, ಕಠಿನವಾಕ್ಯ, ಕಲಹಪ್ರಸ್ತಾವಗಳಿಂದ ಘೋರಸಂಗ್ರಾಮಕ್ಕೆ ಸಿದ್ಧರಾದ ಭೀಮ ದುರ್ಯೋಧನರ ಅನ್ಯೋನ್ಯರೋಷಭಾಷಣವು ವಿಜಯಬೀಜವನ್ನು ಹೊಂದಿದೆ. ಇದು ಸಂಫೇಟ.

೮೫ ವಿದ್ರವೋವಧಬಂಧಾದಿಃ.

ತಾ—ಕೊಲೆ, ಸೆರೆ ಹಿಡಿಯುವುದು ಇತ್ಯಾದಿಗಳು ವಿದ್ರವ.

ಉದಾ—ವೇ. ದ್ರಕ್ಷ್ಯಂತಿ ನಚಿರಾತ್....ಭೂಷಣಂ ‖ ಅಂ. ೬. ಶ್ಲೋ. ೩೪.

೮೬ ದ್ರವೋ ಗುರುತಿರಸ್ಕೃತಿಃ ‖ ೪೫ ‖

ತಾ—ಹಿರಿಯರನ್ನು ತಿರಸ್ಕರಿಸುವುದು ದ್ರವ.

ಉದಾ—ವೇಣೀ. ಭಗವನ್ ಕಾಮಪಾಲ, ಕೃಷ್ಣಾಗ್ರಜ, ಸುಭದ್ರಾ ಭ್ರಾತಃ ಜ್ಞಾತಿಪ್ರೀತಿರ್ಮನಸಿ....ಮಯಿತ್ಥಂ. ಶ್ಲೋ. ೨೦. ಅಂ. ೬. ಇಲ್ಲಿ ಯುಧಿಷ್ಠಿರನು ಗುರುವಾದ ಬಲಭದ್ರನನ್ನು ತಿರಸ್ಕರಿಸುವುದು ದ್ರವ.

೮೭ ವಿರೋಧಶಮನಂ ಶಕ್ತಿಃ.

ತಾ—ವಿರೋಧವನ್ನು ಶಾಂತಗೊಳಿಸುವುದು ಶಕ್ತಿ.

ಉದಾ—ವೇ. ಕುರ್ವಂತ್ವಾಪ್ತಾ ಹತಾನಾಂ....ಸಂಹ್ರಿಯಂತಾಂಬಲಾನಿ. ಶ್ಲೋ. ೩೬. ಅಂ. ೫.

**೮೮ ತರ್ಜನೋದ್ವೇಜನೇ ದ್ಯುತಿಃ.**

ತಾ—ಬೆದರಿಸುವುದು ಅಥವಾ ಉದ್ವೇಗಗೊಳಿಸುವುದು ದ್ಯುತಿ.

ಉದಾ—ವೇ. ಏತಚ್ಚ ವಚನಮುಪಶ್ರುತ್ಯ....ಮಹಾಪಾತಕಿನ್, ಜನ್ಮೇಂದೋರಮಲೇಕುಲೇ....ಲೀಯಸೇ || ಇಲ್ಲಿಂದ ತ್ವಕ್ತ್ವೋತ್ಥಿತಃ ಸರಭಸಂ....ಕಾಲಕೂಟಃ || ವೇ. ಅಂ. ೬. ಶ್ಲೋ. ೭೯.

ಇಲ್ಲಿ ಕಠಿನವಾದ ಮಾತು ಮತ್ತು ಸರೋವರದ ನೀರನ್ನು ಕಲಕುವುದು. ಎಂಬ ಕಾರ್ಯಗಳಿಂದ ದುರ್ಯೋಧನನ್ನು ಬೆದರಿಸಿ, ರೇಗಿಸಿದೆ. ಇದು ದ್ಯುತಿ.

**೮೯ ಗುರುಕೀರ್ತನಂ ಪ್ರಸಂಗಃ.**

ತಾ—ಹಿರಿಯರನ್ನು ಅಥವಾ ಮಹತ್ತ್ವದ ವಸ್ತು, ವಿಷಯಗಳನ್ನು ಹೊಗಳುವುದು ಅಥವಾ ಎತ್ತಿ ಹೇಳುವುದು ಪ್ರಸಂಗ.

ಉದಾ—ವೇ. ದ್ರೌ:—ಯದ್ದೇವಸ್ತ್ರಿಭುವನನಾಥೋ ಭಣತಿ, ತತ್ಕಥ ಮನ್ಯಥಾ ಭವಿಷ್ಯತಿ. ಅಂ. ೬.

**೯೦ ಛಲನಂ ಚಾವಮಾನನಂ** || ೪೬ ||

ತಾ—ಯಾರಾದರೊಬ್ಬರನ್ನು ಅವಮಾನಗೊಳಿಸುವುದು 'ಛಲನ'.

**೯೧ ವ್ಯವಸಾಯಃ ಸ್ವಶಕ್ತ್ಯುಕ್ತಿಃ.**

ತಾ—ತನ್ನ ಶಕ್ತಿಯ ಬಗ್ಗೆ ಹೇಳಿಕೊಳ್ಳುವ ಮಾತು 'ವ್ಯವಸಾಯ'.

ಉದಾ—ವೇ. ನೂನಂತೇನಾದ್ಯ....ಕ್ಷಮಃ || ಅಂ. ೬. ಶ್ಲೋ. ೬.

**೯೨ ಸಂರಬ್ಧಾನಾಂ ವಿರೋಧನಂ ।**

ತಾ—ಉತ್ತೇಜಿತರಾದ ಪಾತ್ರಗಳು ಸ್ವಸಾಮರ್ಥ್ಯವನ್ನು ಹೇಳಿಕೊಳ್ಳುವುದು 'ವಿರೋಧನ.'

ಉದಾ—ರಾಜಾ–ರೇರೇ ಮರುತ್ತನಯ, ಕಿಮೇವಂ ವೃದ್ಧಸ್ಯ....ವೇಣಿಕಾ ಭೀಮಭೂಷಣಂ || ಅಂ. ೫. ಶ್ಲೋ ೩೪ ||

ಇಲ್ಲಿ ಉತ್ತೇಜಿತರಾದ ಭೀಮ ದುರ್ಯೋಧನರ ಸ್ವಸಾಮರ್ಥ್ಯಕಥನವು 'ವಿರೋಧನ.'

**೯೩ ಸಿದ್ಧಾಮಂತ್ರಣತೋ ಭಾವಿದರ್ಶಿಕಾ ಸ್ಯಾತ್ ಪ್ರರೋಚನಾ || ೪೭ ||**

ತಾ—ಯಾರಾದರೂ ಸಿದ್ಧರು ಅಥವಾ ಮುಖ್ಯ ವ್ಯಕ್ತಿಗಳು ಮುಂದೆ ಸಿದ್ಧವಾಗಿ ನಡೆಯುವಂತಹ ಘಟನೆಗಳ ಸೂಚನೆಯನ್ನು ಮೊದಲೇ ಮಾಡಿದರೆ ಅದು 'ಪ್ರರೋಚನಾ'.

ಉದಾ—ವೇ. ಅಹಂ ಚ ದೇವೇನ ಚಕ್ರಪಾಣಿನಾ–ಕೃತಂ ಸಂದೇಹೇನ. ಪೂರ್ಯಂತಾಂ ಸಲಿಲೇನ....ಕುತಃ ಸಂಶಯಃ || ಮಂಗಲಾನಿಕರ್ತುಮಾಜ್ಞಾಪಯತಿ ದೇವೋಯುಧಿಷ್ಠಿರಃ || ಅಂ. ೬. ಶ್ಲೋ. ೧೨. ಇಲ್ಲಿ ದ್ರೌಪದೀ ಕೇಶಬಂಧನ ಮತ್ತು ಯುಧಿಷ್ಠಿರ ರಾಜ್ಯಾಭಿಷೇಕ ಇವುಗಳು ಭವಿಷ್ಯದ ವಿಷಯವಾಗಿದ್ದರೂ ಮೊದಲೇ ಹೇಳಿದ್ದರಿಂದ ಪ್ರರೋಚನಾ.

**೯೪ ವಿಕತ್ಥನಾ ವಿಚಲನಂ.**

ತಾ—ತನ್ನ ಬಗ್ಗೆ ತುಂಬಾ ಹೇಳಿಕೊಳ್ಳುವುದು (ಆತ್ಮಶ್ಲಾಘನೆ) 'ವಿಚಲನ.'

ಉದಾ—ವೇ. ಅರ್ಜುನ :—ತಾತ, ಅಂಬ, ಸಕಲರಿಪುಜಯಾಶಾ.... ಪಾಂಡವೋಽಯಂ || ಅಪಿ ಚ ತಾತ ಚೂರ್ಣಿತಾಶೇಷ....ಶಿರಸಾಂಚತಿ || ಶ್ಲೋ. ೨೭–೨೮. ಅಂ. ೫. ಇಲ್ಲಿ ವಿಜಯ ಬೀಜವನ್ನು ಹೊಂದಿದ ಭೀಮ–ಅರ್ಜುನರ ಸ್ವಗುಣಾವಿಷ್ಕರಣವು ವಿಚಲನ.

**೯೫ ಆದಾನಂ ಕಾರ್ಯಸಂಗ್ರಹಃ.**

ತಾ—ರೂಪಕದಲ್ಲಿ ಹರಡಿರುವ ವಿವಿಧ ಫಲಗಳನ್ನು ಅರ್ಥಾತ್ ವಿವಿಧ ಕಾರ್ಯಗಳನ್ನು ಒಟ್ಟುಗೂಡಿಸುವುದು 'ಆದಾನ.'

ಉದಾ—ವೇ. ಭೀಮ :—ನನು ಭೋಃ ಸಮಂತಪಂಚಕಸಂಚಾರಿಣಃ, ರಕ್ಷೋನಾಹಂ ನ ಭೂತಂ....ಆಸ್ಯತೇಯತ್ || ಶ್ಲೋ. ೩೭. ಅಂ. ೬. ಹೀಗೆ ಸಮಸ್ತ ರಿಪುಗಳ ವಧೆಯ ಕಾರ್ಯಗಳನ್ನು ಸಂಗ್ರಹಿಸಿರುವುದು 'ಆದಾನ'.

## ನಿರ್ವಹಣಸಂಧಿ

**೯೬ ಬೀಜವಂತೋ ಮುಖಾದ್ಯರ್ಥಾ ವಿಪ್ರಕೀರ್ಣಾ ಯಥಾ-
ಯಥಂ || ೪೮ ||
ಐಕಾರ್ಥ್ಯಮುಪನೀಯಂತೇ ಯತ್ರ ನಿರ್ವಹಣಂ ಹಿ ತತ್ ।**

ಅನ್ವ—ಬೀಜವಂತಃ=ಬೀಜವನ್ನು ಒಳಗೊಂಡಿರುವ, ಯಥಾಯಥಂ =ಹೇಗೆ ಉಚಿತವೋ ಹಾಗೆ, ವಿಪ್ರಕೀರ್ಣಾಃ = ಹರಡಿಕೊಂಡಿರುವ, ಮುಖಾದ್ಯರ್ಥಾಃ=ಮುಖ ಪ್ರತಿಮುಖಗರ್ಭ ಅವಮರ್ಶ ಸಂಧಿಗಳ ವಿಷಯ ಗಳು, ಯತ್ರ=ಎಲ್ಲಿ, ಐಕಾರ್ಥ್ಯಂ=ಒಂದೇ ಪ್ರಯೋಜನವುಳ್ಳತನವನ್ನು, ಉಪನೀಯಂತೇ=ಹೊಂದಿಸಲ್ಪಡುತ್ತವೆಯೋ, ತತ್=ಅದು, ನಿರ್ವಹಣಂ= ನಿರ್ವಹಣ ಸಂಧಿಯಾಗುತ್ತದೆ. ಹಿ=ಇದು ಪ್ರಸಿದ್ಧವು.

ಉದಾ—ವೇ. ಕಂಚುಕೀ-(ಉಪಸೃತ್ಯಸಹರ್ಷಂ) ಮಹಾರಾಜ ವರ್ಧಸೇ, ಅಯಂಖಲು ಆಯುಷ್ಮಾನ್-ದುರ್ಲಕ್ಷವ್ಯಕ್ತಿಃ. ಅಂ. ೬. ಇಲ್ಲಿ ಮುಖಾದಿ ಸಂಧಿಗಳಲ್ಲಿ ಅಲ್ಲಲ್ಲಿ ಹರಡಿಕೊಂಡಿದ್ದ ದ್ರೌಪದೀ ಕೇಶ ಬಂಧನದ ಬೀಜಗಳನ್ನು ಏಕತ್ರ ಯೋಜಿಸಿದೆ.

**ಸಂಧಿರ್ವಿಬೋಧೋ ಗ್ರಥನಂ ನಿರ್ಣಯಃ ಪರಿಭಾಷಣಂ
|| ೪೯ ||**

**ಪ್ರಸಾದಾನಂದಸಮಯಾಃ ಕೃತಿಭಾಷೋಪಗೂಹನಾಃ ।**
**ಪೂರ್ವಭಾವೋಪಸಂಹಾರೌ ಪ್ರಶಸ್ತಿಶ್ಚ ಚತುರ್ದಶ ॥ ೫೦ ॥**

ಅನು—ನಿರ್ವಹಣಸಂಧಿಯಲ್ಲಿ ಸಂಧಿ, ವಿಬೋಧ, ಗ್ರಥನ, ನಿರ್ಣಯ, ಪರಿಭಾಷಣ, ಪ್ರಸಾದ, ಆನಂದ, ಸಮಯ, ಕೃತಿ, ಭಾಷಾ, ಉಪಗೂಹನಾ, ಪೂರ್ವಭಾವ, ಉಪಸಂಹಾರ ಮತ್ತು ಪ್ರಶಸ್ತಿ ಈ ಹದಿನಾಲ್ಕು ಅಂಗಗಳಿವೆ.

**೯೮ ಸಂಧಿರ್ಬೀಜೋಪಗಮನಂ.**

**ತಾ**—ಬೀಜವು ಸಮೀಪಕ್ಕೆ ಬರುವುದು ಸಂಧಿ.

ಉದಾ—ವೇ. ಭೀಮ :—ಭವತಿ, ಯಜ್ಞವೇದಿಸಂಭವೇ ! ಸ್ಮರತಿ ಭವತೀ ಯತ್ತನ್ಮಯೋಕ್ತಂ ಚಂಚದ್ಭುಜ....ದೇವಿ ಭೀಮಃ ॥ ಇಲ್ಲಿ ಮುಖ ಸಂಧಿಯಲ್ಲಿ ಸ್ಥಾಪಿತವಾದ ಬೀಜವು ಮರಳಿ ಹತ್ತಿರ ಬರುವುದು ಸಂಧಿ. ಅಂ. ೬.

**೯೯ ವಿಬೋಧಃ ಕಾರ್ಯಮಾರ್ಗಣಂ.**

**ತಾ**—ಕಾರ್ಯವನ್ನು ಎಂದರೆ ಇತಿ ವೃತ್ತದ ಮುಖ್ಯ ಫಲವನ್ನು ಪುನಃ ಹುಡುಕುವುದು 'ವಿಬೋಧ.'

ಉದಾ—ವೇ. ಭೀಮ :—ಮುಂಚತು ಮಾಮಾರ್ಯಃಕ್ಷಣಮೇಕಂ.... ಗಚ್ಛತುಭವಾನ್, ಅನುಭವತು ತಪಸ್ವಿನೀ ವೇಣೀ ಸಂಹಾರಂ. ಅಂ. ೬. ಇಲ್ಲಿ ದ್ರೌಪದಿಯ ಕೇಶಸಂಗ್ರಹಕಾರ್ಯದ ಅನ್ವೇಷಣೆ ಬಂದಿದೆ, ಇದು 'ವಿಬೋಧ.'

**೧೦೦ ಗ್ರಥನಂತದುಪಕ್ಷೇಪೋ.**

**ತಾ**—ಕಾರ್ಯದ ಪ್ರಕೃತಾನುಸ

ಉದಾ—ವೇ. ಭೀಮ :—ಪಾಂಚಾಲಿ, ನಖಲುಮಯಿ ಜೀವತಿ.... ಸಂಹರಾಮಿ. ಅಂ. ೬.

## ೧೦೧ ಅನುಭೂತಾಖ್ಯಾತುನಿರ್ಣಯಃ || ೫೧ ||

**ತಾ**—ಅನುಭವಿಸಿ ತಿಳಿದುದನ್ನು ಹೇಳುವುದು ನಿರ್ಣಯ.

ಉದಾ—ವೇ. ಭೀಮ :—ದೇವ, ಅಜಾತಶತ್ರೋ!....ದುರಾತ್ಮನಃ, ಭೂಮೌ ಕ್ಷಿಪ್ತಂ ಶರೀರಂ....ಧಾರ್ತರಾಷ್ಟ್ರಸ್ಯ ಶೇಷಂ || ಅಂ. ೬. ಶ್ಲೋ. ೩೯. ಹೀಗೆ ತನ್ನ ಅನುಭವದ ವಿಷಯವನ್ನು ಹೇಳುವುದು ನಿರ್ಣಯ.

## ೧೦೨ ಪರಿಭಾಷಾ ಮಿಥೋಜಲ್ಪಃ.

**ತಾ**—ಪರಸ್ಪರವಾದ ಮಾತು ಪರಿಭಾಷಾ ಅಥವಾ 'ಪರಿಭಾಷಣ'.

ಉದಾ—ವೇ. ಭೀಮ :—ಕೃಷ್ಣಾಯೇನಾಸಿರಾಜ್ಞಾಂ....ಉಪಶಾಂತ್ಯೈ || ಬುದ್ಧಿಮತಿಕೇ, ಕ್ವಸಾಭಾನುಮತೀ ಯಾಪಹಸತಿ ಪಾಂಡವದಾರಾನ್. ಅಂ.೬. ಶ್ಲೋ. ೪೧. ಈ ಮಾತುಗಳು ಪರಿಭಾಷಣ.

## ೧೦೩ ಪ್ರಸಾದಃ ಪರ್ಯುಪಾಸನಂ.

**ತಾ**—ಪ್ರಸನ್ನತೆಗಾಗಿ ಭಕ್ತಿ ಅಥವಾ ಪ್ರೇಮದಿಂದ ಮಾಡುವ ಶೂಶ್ರೂಷೆ ಅಥವಾ ಆರಾಧನೆಯು 'ಪ್ರಸಾದ'.

ಉದಾ—ವೇ. ಭೀಮಸೇನ :—( ದ್ರೌಪದೀಮುಪಸೃತ್ಯ ) ದೇವಿ, ಪಾಂಚಾಲರಾಜತನಯೇ, ದಿಷ್ಟ್ಯಾವರ್ಧಸೇ, ರಿಪುಕುಲಕ್ಷಯೇಣ. ಅಂ. ೬. ಇಲ್ಲಿ ಭೀಮಸೇನನು ದ್ರೌಪದಿಯನ್ನು ಆರಾಧಿಸುವುದು 'ಪ್ರಸಾದ'.

## ೧೦೪ ಆನಂದೋವಾಂಛಿತಾವಾಪ್ತಿಃ.

**ತಾ**—ಬಯಸಿದ್ದನ್ನು ಪಡೆಯುವುದು ಆನಂದ.

ಉದಾ—ದ್ರೌಪದೀ :—ನಾಥ, ವಿಸ್ಮೃತಾಸ್ಮಿ ಏತಂ ವ್ಯಾಪಾರಂ, ನಾಥಸ್ಯ ಪ್ರಸಾದೇನ ಪುನರಪಿ ಶಿಕ್ಷಿಷ್ಯೇ. ಅಂ. ೬. ಇಲ್ಲಿ ದ್ರೌಪದಿಗೆ ತಾನು ಬಯಸಿದ ಕೇಶಸಂಯಮನದ ಪ್ರಾಪ್ತಿಯುಂಟಾಗುವುದು 'ಆನಂದ'.

೧೦೫ ಸಮಯೋ ದುಃಖನಿರ್ಗಮಃ || ೫೨ ||

ತಾ — ದುಃಖವು ನಾಶವಾಗುವುದು ಸಮಯ.

ಉದಾ—ವೇ. ಯುಧಿಷ್ಠಿರ :—ಭಗವನ್ ಕುತಸ್ತಸ್ಯವಿಜಯಾದನ್ಯತ್.... ಆಶಾಸ್ತೇ, ಕೃತಗುರು–ನತ್ವಾಂ || ಅಂ. ೬. ಶ್ಲೋ. ೪೩. ಇಲ್ಲಿ ಯುಧಿಷ್ಠಿರನ ದುಃಖನಾಶವು ಸಮಯ.

೧೦೬ ಕೃತಿರ್ಲಬ್ಧಾರ್ಥಶಮನಂ.

ತಾ—ಫಲವು ದೊರೆತ ಮೇಲೆ ಅದರಿಂದ ಉಂಟಾದ ತೃಪ್ತಿಯು ಅಥವಾ ಸ್ಥಿರೀಕರಣವು ಶಮನವು.

ಉದಾ—ವೇ. ಕೃಷ್ಣ :—ಮಹಾರಾಜ ಯುಧಿಷ್ಠಿರ, ವ್ಯಾಸೋsಯಂ.... ರಾಜ್ಯಾಭಿಷೇಕಾಯತೇ || ಅಂ. ೬. ಶ್ಲೋ. ೪೪.

೧೦೭ ಮಾನಾದ್ಯಾಪ್ತಿಶ್ಚ ಭಾಷಣಂ |

ತಾ—ಮಾನ ಇತ್ಯಾದಿಗಳನ್ನು ಪಡೆಯುವುದು ಭಾಷಣ (ಭಾಷಾ).

ಉದಾ—ವೇ. ಯುಧಿಷ್ಠಿರ :—ದೇವಿ ! ಏಷ ತೇ ಮೂರ್ಧಜಾನಾಂ ಸಂಹಾರಃ ಅಭಿನಂದಿತಃ ನಭಸ್ಥಲಚಾರಿಣಾ ಸಿದ್ಧಜನೇನ. ಅಂ. ೬.

೧೦೮ ಕಾರ್ಯದೃಷ್ಟ್ಯದ್ಭುತಪ್ರಾಪ್ತೀ ಪೂರ್ವಭಾವೋಪಗೂಹನೇ || ೫೩ ||

ತಾ—ಇಷ್ಟ ಕಾರ್ಯದ ದರ್ಶನ ಮತ್ತು ಅದ್ಭುತವಾದದ್ದು ದೊರಕುವುದು ಇವು ಕ್ರಮವಾಗಿ ಪೂರ್ವಭಾವ ಮತ್ತು ಉಪಗೂಹನಗಳು.

ಉದಾ—ವೇ. ಭೀಮ :—ಬುದ್ಧಿಮತಿಕೇ, ಕ್ವಸಾ ಭಾನುಮತೀ ಯೋಪಹಸತಿ ಪಾಂಡವದಾರಾನ್–ಅಂ. ೬. ಇದು ಪೂರ್ವಭಾವ. (ನೇಪಥ್ಯೇ) ಮಹಾಸಮರಾನಲದಗ್ಧಶೇಷಾಯ ಸ್ವಸ್ತಿ ಭವತು ರಾಜನ್ಯಕುಲಾಯ–

ಕ್ರೋಧಾಂ ಧೈರ್ಯಸ್ಯ....ರಾಜ್ಞಾಂಕುಲೇಭ್ಯಃ ॥ ಅಂ. ೬. ಶ್ಲೋ. ೪೨.
ಇಲ್ಲಿ ಪ್ರಾಪ್ತವಾದ ಅದ್ಭುತವಿಷಯವು ಉಪಗೂಹನ.

೧೦೯ ವರಾಪ್ತಿಃ ಕಾವ್ಯಸಂಹಾರಃ.

ತಾ—ಉತ್ತಮವಾದ ಅಪೇಕ್ಷಿತ ವಸ್ತುವನ್ನು ಪಡೆಯುವುದು 'ಕಾವ್ಯ ಸಂಹಾರ'.

ಉದಾ—ವೇ. ಅಂ.೬. ಕೃಷ್ಣ :—'ತತ್ ಕಥಯ ಮಹಾರಾಜಕಿಮಸ್ಮಾತ್ ಪರಂ ಸಮೀಹಿತಂ ಸಂಪಾದಯಾಮಿ ?' ಇದು ಕಾವ್ಯ ವಿಷಯಕವಾದ ಉಪಸಂಹಾರವು. ಇದೇ ಕಾವ್ಯಸಂಹಾರ.

೧೧೦ ಪ್ರಶಸ್ತಿಃ ಶುಭಶಂಸನಂ.

ತಾ—ಶುಭವನ್ನು ಕೋರುವುದು ಪ್ರಶಸ್ತಿ.

ಉದಾ—ಯುಧಿಷ್ಠಿರ :—ಪ್ರೀತತರಶ್ಚೇದ್ಭಗವಾಂಸ್ತದಿದಮಸ್ತು–ಅಕೃಪಣ ಮರುಕ್ಶ್ರಾಂತಂ......ಭೂಪಃಪ್ರಸಾಧಿತಮಂಡಲಃ ॥ ವೇ. ಅಂ. ೬. ಶ್ಲೋ. ೪೬.

## ಸಂಧ್ಯಂಗಗಳ ಪ್ರಯೋಜನಗಳು

೧೧೧ ಉಕ್ತಾಂಗಾನಾಂ ಚತುಷ್ಷಷ್ಟಿಃ ಷೋಢಾಚೈಷಾಂ ಪ್ರಯೋಜನಂ ॥ ೩೮ ॥

ಹೀಗೆ ಮುಖಾದಿ ಪಂಚಸಂಧಿಗಳ 64 ಅಂಗಗಳನ್ನು ಹೇಳಿದ್ದಾಯಿತು. ಇವುಗಳಿಗೆ ಆರು ಬಗೆಯ ಪ್ರಯೋಜನಗಳಿವೆ.

೧೧೨ ಆರು ಪ್ರಯೋಜನಗಳು—

ಇಷ್ಟಸ್ಯಾರ್ಥಸ್ಯ ರಚನಾ ಗೋಪ್ಯಗುಪ್ತಿಃ ಪ್ರಕಾಶನಂ ।
ರಾಗಃ ಪ್ರಯೋಗಸ್ಯಾಶ್ಚರ್ಯಂ ವೃತ್ತಾಂತಸ್ಯಾನುಪಕ್ಷಯಃ ॥ ೩೯ ॥

ಅರವತ್ತನಾಲ್ಕು ಸಂಧ್ಯಂಗಗಳ ಪ್ರಯೋಜನಗಳು ಆರು. (೧) ಉದ್ದಿಷ್ಟವಾದ ವಿಷಯವನ್ನು ಯೋಗ್ಯವಾದ ರೀತಿಯಲ್ಲಿ ವಿಸ್ತರಿಸಿ ರಚಿಸುವುದು (೨) ರಹಸ್ಯವಾಗಿಡಬೇಕಾದ ವಿಷಯವನ್ನು ಗುಪ್ತವಾಗಿಯೇ ಇಡುವುದು (೩) ಪ್ರಕಾಶಪಡಿಸಬೇಕಾದ ವಿಷಯವನ್ನು ಪ್ರಕಾಶಪಡಿಸುವುದು (೪) ಅಭಿನೇಯವಸ್ತುವಿನಲ್ಲಿರಾಗವೃದ್ಧಿ (೫) ಪ್ರಯೋಗದಲ್ಲಿ ಆಶ್ಚರ್ಯ ವನ್ನುಂಟು ಮಾಡುವುದು (೬) ಮತ್ತು ಕಥಾವಸ್ತುವಿನ ವಿಸ್ತಾರ.

ಹೀಗೆ ಐದು ಸಂಧಿಗಳಲ್ಲಿಯೂ ಕ್ರಮವಾಗಿ ಇಷ್ಟಿಷ್ಟು ಅಂಗಗಳು ಇರುತ್ತವೆ ಎಂದೇನೋ ಹೇಳಲ್ಪಟ್ಟಿದೆ. ಆದರೆ ಆಯಾ ಸಂಧಿಗಳಲ್ಲಿ ಕ್ರಮವಾಗಿ ಆಯಾ ಅಂಗಗಳು ಇದ್ದೇ ಇರಬೇಕೆಂಬ ನಿಯಮವೇನೂ ಇಲ್ಲ. ಪ್ರತಿಯೊಂದು ಸಂಧಿ ಯಲ್ಲಿಯೂ ಕೆಲವು ಅಂಗಗಳು ಮಾತ್ರ ಆವಶ್ಯಕವಾದವುಗಳು. ಮಿಕ್ಕವು ಗೌಣ, ಅಂದರೆ ಇದ್ದರೂ ಇರಬಹುದು ಇಲ್ಲದೆಯೂ ಇರಬಹುದು. ಆವಶ್ಯಕವಾದ ಅಂಗಗಳೂ ಸಹ ತಮಗೆ ನಿಯಮಿತವಾದ ಸಂಧಿಗಳಲಿಲ್ಲದೆ ಪರಸ್ಪರ ವ್ಯತ್ಯಾಸ ದಿಂದಲೂ ಇರಬಹುದು. ರೂಪಕದ ಕಥಾವಸ್ತುವಿನ ಅನುಕೂಲಕ್ಕೆ ತಕ್ಕಂತೆ ಈ ವ್ಯತ್ಯಾಸಗಳು ಮಾಡಲ್ಪಡುತ್ತವೆ.

ಈವರೆಗೆ ವಸ್ತುವಿನ ಪ್ರಕಾರಗಳು, ಅರ್ಥಪ್ರಕೃತಿ, ಅವಸ್ಥೆ, ಸಂಧಿ ಇವು ಗಳನ್ನು ಸಾಂಗವಾಗಿ ವಿವರಿಸಲಾಯಿತು. ವಸ್ತುವಿನಲ್ಲಿ ತೋರಿಸಬೇಕಾದದ್ದು, ತೋರಿಸಬಾರದಂಥದ್ದು, ಮತ್ತು ಕೇಳಿಸಬೇಕಾದದ್ದು, ಕೆಲವರಿಗೆ ಮಾತ್ರ ಕೇಳಿಸಬೇಕಾದುದು, ಈ ಮೊದಲಾದ ಭೇದಗಳನ್ನು ಮುಂದೆ ಹೇಳಿದೆ.

## ವಸ್ತುವಿನ ಎರಡು ವಿಭಾಗಗಳು

**೧೧೩ ಸೂಚ್ಯ ಮತ್ತು ದೃಶ್ಯಶ್ರವ್ಯ.**

**ದ್ವೇಧಾ ವಿಭಾಗಃ ಕರ್ತವ್ಯಃ ಸರ್ವಸ್ಯಾಪೀಹ ವಸ್ತುನಃ |**
**ಸೂಚ್ಯಮೇವ ಭವೇತ್ಕಿಂಚಿತ್ ದೃಶ್ಯಶ್ರವ್ಯಮಥಾಪರಂ || ೫೬ ||**

ರೂಪಕದ ಸಮಸ್ತಕಥಾವಸ್ತುವನ್ನು ಸಾಮಾನ್ಯವಾಗಿ ಮತ್ತೆ ಎರಡು

ರೀತಿಯಾಗಿ ವಿಂಗಡಿಸಬಹುದು. ಕಥಾವಸ್ತುವಿನ ಕೆಲಕೆಲವು ಭಾಗ ಕೇವಲ ಸೂಚ್ಯವಾಗಿರುತ್ತದೆ. ಅದನ್ನು ರಂಗಸ್ಥಳದ ಮೇಲೆ ತೋರಿಸದೆ ಅದರ ಸೂಚನೆಯು ಮಾತ್ರ ಕೊಡಲ್ಪಡುತ್ತದೆ. ಉಳಿದ ಭಾಗವು ದೃಶ್ಯಶ್ರವ್ಯವಾಗಿರುತ್ತದೆ. ಅದನ್ನು ರಂಗಸ್ಥಳದ ಮೇಲೆ ಕಾಣಲೂ ಬಹುದು ಮತ್ತು ಅದರ ವಿಷಯವನ್ನು ಕೇಳಲೂ ಬಹುದು.

೧೧೪ **ಸೂಚ್ಯ ಮತ್ತು ದೃಶ್ಯಶ್ರವ್ಯಗಳ ಔಚಿತ್ಯ—**

**ನೀರಸೋಽನುಚಿತಸ್ತತ್ರ ಸಂಸೂಚ್ಯೋ ವಸ್ತುವಿಸ್ತರಃ ।**
**ದೃಶ್ಯಸ್ತು ಮಧುರೋದಾತ್ತರಸಭಾವ ನಿರಂತರಃ ॥ ೫೬ ॥**

ರಸವಿಹೀನವಾದ ಮತ್ತು ರಂಗದ ಮೇಲೆ ಅಭಿನಯಿಸಲು ಅಯೋಗ್ಯವಾದ ರೂಪಕದ ವಸ್ತುವಿನ ವಿವರಗಳು ಪೂರ್ಣಸೂಚ್ಯವಾಗಿರಬೇಕು. ಉದ್ದಕ್ಕೂ ಮಧುರವಾದ ರಸ ಮತ್ತು ಉದಾತ್ತಭಾವಗಳಿರುವಂತಹವಸ್ತು ಭಾಗಗಳು ದೃಶ್ಯವಾಗಿರಬೇಕು.

## ಐದು ಅರ್ಥೋಪಕ್ಷೇಪಕಗಳು

೧೧೫ **ಸೂಚ್ಯಸೂಚನೆಯ ಸಾಧನೆಗಳು—**

**ಅರ್ಥೋಪಕ್ಷೇಪಕೈಃ ಸೂಚ್ಯಂ ಪಂಚಭಿಃ ಪ್ರತಿಪಾದಯೇತ್ ।**
**ವಿಷ್ಕಂಭಚೂಲಿಕಾಂಕಾಸ್ಯಾಂಕಾವತಾರಪ್ರವೇಶಕೈಃ ॥ ೫೭ ॥**

ವಿಷ್ಕಂಭ, ಚೂಲಿಕಾ, ಅಂಕಾಸ್ಯ, ಅಂಕಾವತಾರ, ಪ್ರವೇಶಕ ಎಂಬ ಐದು ಅರ್ಥೋಪಕ್ಷೇಪಕಗಳಿಂದ ಸೂಚ್ಯವಾದ ವಸ್ತುಭಾಗವನ್ನು ಪ್ರತಿಪಾದಿಸತಕ್ಕದ್ದು.

೧೧೬ **ವಿಷ್ಕಂಭಲಕ್ಷಣ—**

**ವೃತ್ತವರ್ತಿಷ್ಯಮಾಣಾನಾಂ ಕಥಾಂಶಾನಾಂ ನಿದರ್ಶಕಃ ।**
**ಸಂಕ್ಷೇಪಾರ್ಥಸ್ತು ವಿಷ್ಕಂಭೋ ಮಧ್ಯಪಾತ್ರಪ್ರಯೋಜಿತಃ**
**॥ ೫೮ ॥**

**ತಾ**—ರೂಪಕದಲ್ಲಿ ಅದುವರೆಗೆ ಘಟಿಸಿದ ಮತ್ತು ಮುಂದೆ ನಡೆಯಲಿರುವ ಕಥಾಂಶಗಳನ್ನು, ಸಂಕ್ಷೇಪವಾಗಿ ಸೂಚಿಸುವ ಭಾಗಕ್ಕೆ 'ವಿಷ್ಕಂಭ' ಅಥವಾ 'ವಿಷ್ಕಂಭಕ'ವೆಂದು ಹೆಸರು. ಇದು ಮಧ್ಯಮ ವರ್ಗದ ಪಾತ್ರಗಳಿಂದ ಪ್ರಯೋಜಿತವಾಗಿರುತ್ತದೆ.

ಉತ್ತಮಾಃ ಪೀಠಮರ್ದಾದ್ಯಾಃ ಮಧ್ಯೌ ವಿಟವಿದೂಷಕೌ | ತಥಾ ಶಕಾರ ಚೇಟಾದ್ಯಾ ಅಧಮಾಃ ಪರಿಕೀರ್ತಿತಾಃ || ಎಂದು ಉತ್ತಮ ಮಧ್ಯಮ ಅಧಮ ಪಾತ್ರ ಭೇದವನ್ನು ಹೇಳಲಾಗಿದೆ. (ನಾ.ದ.)

೧೧೭ **ವಿಷ್ಕಂಭದ ಎರಡು ಭೇದಗಳು**—

**ಏಕಾನೇಕಕೃತಃ ಶುದ್ಧಃ ಸಂಕೀರ್ಣೋ ನೀಚಮಧ್ಯಮೈಃ |**

**ತಾ**—ಒಂದು ಅಥವಾ ಒಂದಕ್ಕಿಂತ ಹೆಚ್ಚು ಮಧ್ಯಪಾತ್ರಗಳಿಂದ ಕೂಡಿದ್ದು ಶುದ್ಧವಿಷ್ಕಂಭ. ನೀಚ ಮತ್ತು ಮಧ್ಯಪಾತ್ರಗಳಿಂದ ಕೂಡಿದ್ದು ಸಂಕೀರ್ಣವಿಷ್ಕಂಭ. ಒಂದೇ ಮಧ್ಯಮಪಾತ್ರವಿದ್ದಾಗ ಅಲ್ಲಿ ಮಾತುಗಳು 'ಸ್ವಗತ'ವಾಗಿರುತ್ತವೆ.

೧೧೮ **ಪ್ರವೇಶಕಲಕ್ಷಣ**—

**ತದ್ವದೇವಾನುದಾತ್ತೋಕ್ತ್ಯಾ ನೀಚಪಾತ್ರಪ್ರಯೋಜಿತಃ ||೬೦||**

**ಪ್ರವೇಶೋಂಕದ್ವಯಸ್ಯಾಂತಃ ಶೇಷಾರ್ಥಸ್ಯೋಪಸೂಚಕಃ |**

**ತಾ**—ವಿಷ್ಕಂಭಕದಂತೆಯೇ ಹಿಂದು ಮುಂದಿನ ಕಥಾಂಶಗಳನ್ನು ನೀಚ ಪಾತ್ರಗಳ ಮೂಲಕ ಉದಾತ್ತವಲ್ಲದ ಮಾತುಗಳಿಂದ ಸೂಚಿಸಿದರೆ ಅದು 'ಪ್ರವೇಶ' ಅಥವಾ 'ಪ್ರವೇಶಕ'ವೆನಿಸುತ್ತದೆ. ಇದು ಎರಡು ಅಂಕಗಳ ಮಧ್ಯದಲ್ಲಿಯೇ ಬರುತ್ತದೆ ಪ್ರವೇಶಕವು ಪ್ರಥಮಾಂಕದಲ್ಲಿ ಇರುವುದಿಲ್ಲ. ಪ್ರವೇಶಕದ ಭಾಷೆಯು ಸಂಸ್ಕೃತವಲ್ಲ. ಅದು ಮಾಗಧೀ, ಶಕಾರೀ, ಅಭೀರೀ, ಚಾಂಡಾಲೀ, ಪೈಶಾಚೀ ಮುಂತಾದ ಕೀಳು ಪ್ರಾಕೃತವಾಗಿರುತ್ತದೆ. ಅರ್ಥೋಪಕ್ಷೇಪಗಳನ್ನು

ಹೇಳುವಾಗ ಪ್ರವೇಶಕವು ಕೊನೆಗೆ ಬಂದಿದ್ದರೂ (೧೧೫–೫೮) ಲಕ್ಷಣದಲ್ಲಿ ಅದು ವಿಷ್ಕಂಭಕವನ್ನು ಹೆಚ್ಚಾಗಿ ಹೋಲುವುದರಿಂದ ಅದರ ನಂತರ ಇದರ ಲಕ್ಷಣ ವನ್ನು ಕೊಡಲಾಗಿದೆ.

೧೧೯ **ಚೂಲಿಕಾ—**

**ಅಂತರ್ಯವನಿಕಾಸಂಸ್ಥೈಶ್ಚೂಲಿಕಾರ್ಥಸ್ಯಸೂಚನಾ–**

**ತಾ**—ಪಾತ್ರವು ತೆರೆಯ ಒಳಗಡೆ ಇದ್ದು ಕಥಾವಿಷಯವನ್ನು ಸೂಚಿಸು ವುದು 'ಚೂಲಿಕಾ'.

ಉದಾ—ಉತ್ತರರಾಮ ಚ. ಅಂ. ೨. (ನೇಪಥ್ಯೇ) ಸ್ವಾಗತಂ ತಪೋ–ಧನಾಯಾಃ (ತತಃ ಪ್ರವಿಶತಿ ತಪೋಧನಾ) ಇಲ್ಲಿ ನೇಪಥ್ಯಪಾತ್ರವಾದ ವಾಸಂತಿಕೆಯಿಂದ ಆತ್ರೇಯಿಯ ಬರವಿನ ಸೂಚನೆಯು 'ಚೂಲಿಕಾ'. ಮಹಾವೀರಚ. ಅಂಕ ೪. ಆದಿಯಲ್ಲಿ (ನೇಪಥ್ಯೇ) ಭೋಃ ಭೋಃ ವೈಮಾನಿಕಾಃ ಪ್ರವರ್ತ್ಯಂತಾಂ ಪ್ರವರ್ತ್ಯಂತಾಂ ಮಂಗಲಾನಿ, ಕೃಶಾಶ್ವಾಂತೇವಾಸೀ....ದಿನಕರಕುಲೇಂದುರ್ವಿಜಯತೇ ॥ ಇಲ್ಲಿ ನೇಪಥ್ಯದ ದೇವ ಪಾತ್ರ ಗಳಿಂದ ರಾಮನು ಪರಶುರಾಮನನ್ನು ಸೋಲಿಸಿದನೆಂದು ಸೂಚಿತವಾಗಿದೆ. ಇದು ಚೂಲಿಕಾ.

೧೨೦ **ಅಂಕಾಸ್ಯಲಕ್ಷಣ—**

**ಅಂಕಾಂತಪಾತ್ರೈರಂಕಾಸ್ಯಂ ಛಿನ್ನಾಂಕಸ್ಯಾರ್ಥಸೂಚನಾತ್ ।**

**ತಾ**—ಯಾವುದೊಂದು ಅಂಕದ ಕೊನೆಯ ಪಾತ್ರಗಳಿಂದ ಮುಂದಿನ ಅಂಕದ ವಿಷಯವನ್ನು ಸೂಚಿಸುವುದು 'ಅಂಕಾಸ್ಯ'.

ಉದಾ—ಮಹಾ. ಚ. ಅಂ. ೨. ಕೊನೆ. (ಪ್ರವಿಶ್ಯ) ಸುಮಂತ್ರ :— ಭಗವಂತೌ ವಸಿಷ್ಠವಿಶ್ವಾಮಿತ್ರೌ ಭವತ : ಸ ಭಾರ್ಗವಾನಾಹ್ವಯತಃ.... (ತತಃ ಪ್ರವಿಶಂತ್ಯುಪವಿಷ್ಟಾಃ ವಸಿಷ್ಠವಿಶ್ವಾಮಿತ್ರಪರಶುರಾಮಾಃ) ಇಲ್ಲಿ ಸುಮಂತ್ರಪಾತ್ರಪ್ರವೇಶದ ಮೂಲಕ ಹಿಂದಿನ ಅಂಕದಲ್ಲಿ ಶತಾನಂದ ಜನಕರ

ಕಥಾವಿಷಯವು ಕಡಿದು ಮುಂದಿನ ಅಂಕದ ಆರಂಭದ ಸೂಚನೆ ಬಂದಿದೆ. ಇದು 'ಅಂಕಾಸ್ಯ'.

೧೨೧ **ಅಂಕಾವತಾರಲಕ್ಷಣ—**

**ಅಂಕಾವತಾರಸ್ತ್ವಂಕಾಂತೇ ಪಾತೋಽಂಕಸ್ಯಾವಿಭಾಗತಃ ||೬೨||**
**ಏಭಿಃ ಸಂಸೂಚಯೇತ್ ಸೂಚ್ಯಂ ದೃಶ್ಯಮಂಕೈಃ**
**ಪ್ರದರ್ಶಯೇತ್ ।**

ತಾ—ಯಾವುದಾದರೊಂದು ಅಂಕದ ಕೊನೆಯಲ್ಲಿ ಇನ್ನೊಂದು ಅಂಕವು ಅವಿಭಾಜ್ಯವಾಗಿ ಬರುವುದು 'ಅಂಕಾವತಾರ'. ಸೂಚ್ಯವಾದ ವಿಷಯಗಳನ್ನು ಇವುಗಳಿಂದ ಅಂದರೆ ಮೇಲೆ ಹೇಳಿದ ಐದು ಬಗೆಯ ಅರ್ಥೋಪಕ್ಷೇಪಕಗಳಿಂದ ಚೆನ್ನಾಗಿ ಸೂಚಿಸತಕ್ಕದ್ದು. ದೃಶ್ಯವಾದ ವಿಷಯಗಳನ್ನು ಅಂಕಗಳಲ್ಲಿ ಪ್ರದರ್ಶಿಸತಕ್ಕದ್ದು.

ಉದಾ—ಮಾಲವಿಕಾಗ್ನಿಮಿತ್ರ ಅಂ. ೧. ಕೊನೆ. ವಿದೂಷಕ :—ತೇನ ಹಿ ದ್ವಾವಪಿ ದೇವ್ಯಾಃ ಪ್ರೇಕ್ಷಾಗೃಹಂ ಗತ್ವಾ ಸಂಗೀತರಚನಾಂಕೃತ್ವಾ ತತ್ರ ಭವತೋ ದೂತಂ ಪ್ರೇಷಯತಂ, ಅಥವಾ ಮೃದಂಗ ಶಬ್ದ ಏವ ನಃ ಉತ್ಥಾಪಯಿಷ್ಯತಿ. ಇದಾದ ಮೇಲೆ ಮೃದಂಗಶಬ್ದವನ್ನು ಕೇಳಿದ ಅನಂತರ ಮೊದಲ ಅಂಕದ ಪಾತ್ರಗಳೇ ಮುಂದುವರಿದು ಮುಂದಿನ ಅಂಕ ಆರಂಭವಾಗುತ್ತದೆ. ಮೊದಲನೆಯ ಅಂಕದಲ್ಲಿ ವರ್ಣಿತವಾದ ಕಥೆಯು ಕಡಿದು ಹೋಗದೆ ಎರಡನೆಯ ಅಂಕದಲ್ಲಿ ನೇರವಾಗಿ ಮುಂದುವರಿಯುತ್ತದೆ. ಇದು 'ಅಂಕಾವತಾರ'.

೧೨೨ **ಮತ್ತೊಂದು ರೀತಿಯ ವಸ್ತು ವಿಭಾಗ—**

**ನಾಟ್ಯಧರ್ಮಾಪೇಕ್ಷ್ಯೈತತ್ ಪುನರ್ವಸ್ತು ತ್ರಿಧೇಷ್ಯತೇ || ೬೩ ||**

**ತಾ**—ನಾಟ್ಯಧರ್ಮಕ್ಕೆ ಅನುಗುಣವಾಗಿ ವಸ್ತುವು ಪುನಃ ಮೂರು ವಿಧವಾಗಿರುತ್ತದೆ. ಲೋಕಸಹಜವಾದ ಸಂಪ್ರದಾಯವು ನಾಟ್ಯದಲ್ಲಿ ಬಂದರೆ ಅದು 'ಲೋಕಧರ್ಮ.'

ಉದಾ—ದುಃಖ ಬಂದಾಗ ಅಳುವನ್ನು ಅಭಿನಯಿಸುವುದು. ಅದನ್ನೇ ನಾಟ್ಯ ಅಥವಾ ಸಂಗೀತದಿಂದ ತೋರಿಸುವುದು 'ನಾಟ್ಯಧರ್ಮ'.

೧೨೩ ನಾಟ್ಯಧರ್ಮ ವಿಭಾಗ—

**ಸರ್ವೇಷಾಂ ನಿಯತಸ್ಯೈವ ಶ್ರಾವ್ಯಮಶ್ರಾವ್ಯಮೇವ ಚ ।**

ತಾ—ಎಲ್ಲರಿಗೂ ಕೇಳುವಂಥದು, ಕೆಲವರಿಗೆ ಮಾತ್ರ ಕೇಳುವಂಥದು, ಮತ್ತು ಕೇಳದೇ ಇರುವಂಥದು ಎಂದು ನಾಟ್ಯಧರ್ಮ ಮೂರು ವಿಧ. (ಸರ್ವಶ್ರಾವ್ಯ, ನಿಯತಶ್ರಾವ್ಯ ಮತ್ತು ಅಶ್ರಾವ್ಯ ಹೀಗೆ ಮೂರು ವಿಧಗಳು).

೧೨೪ ಪ್ರಕಾಶ ಸ್ವಗತಗಳ ಲಕ್ಷಣ—

**ಸರ್ವಶ್ರಾವ್ಯಂ ಪ್ರಕಾಶಂಸ್ಯಾದಶ್ರಾವ್ಯಂ ಸ್ವಗತಂ ಮತಂ ॥ ೬೪ ॥**

ತಾ—ಎಲ್ಲರಿಗೂ ಕೇಳುವಂತಹ ಮಾತು 'ಪ್ರಕಾಶ'. ಎಲ್ಲರಿಗೂ ಕೇಳದಂತಹ ಮಾತು 'ಸ್ವಗತ'.

೧೨೫ ನಿಯತ ಶ್ರಾವ್ಯಗಳು—

**ದ್ವಿಧಾಽನ್ಯನ್ನಾಟ್ಯಧರ್ಮಾಖ್ಯಂ ಜನಾಂತಮಪವಾರಿತಂ ।**

ತಾ—ನಾಟ್ಯಧರ್ಮವಾದ ನಿಯತಶ್ರಾವ್ಯದಲ್ಲಿ ಜನಾಂತ (ಜನಾಂತಿಕ) ಮತ್ತು ಅಪವಾರಿತ ಎಂದು ಎರಡು ಭೇದಗಳಿವೆ.

೧೨೬ ಜನಾಂತಿಕಲಕ್ಷಣ—

**ತ್ರಿಪತಾಕಾಕರೇಣಾನ್ಯಾನಪವಾರ್ಯಾಂತರಾಕಥಾಂ ॥ ೬೫ ॥**
**ಅನ್ಯೋನ್ಯಾಮಂತ್ರಣಂ ಯತ್ಸ್ಯಾತ್ ಜನಾಂತೇ**
**ತಜ್ಜನಾಂತಿಕಂ ।**

ತಾ—ತನಗೆ ಬೇಕಾಗಿರುವ ಒಬ್ಬರ ಹತ್ತಿರ, ತ್ರಿಪತಾಕಾಹಸ್ತದಿಂದ ಅನ್ಯರನ್ನು ಬೇರೆಯಾಗಿಸಿ ಬೇರೆ ಮಾತನ್ನು ಪರಸ್ಪರವಾಗಿ ಸಂಭಾಷಿಸುವುದು 'ಜನಾಂತಿಕ'. ಹಲವರು ಇರುವಾಗ ಇತರರಿಗೆ ಕೇಳದಂತೆ ಮಾತನಾಡುವುದು.

ಅನಾಮಿಕಾ (ಉಂಗುರ ಬೆರಳು) ಮಡಿಸಿರುವ ಮತ್ತು ಉಳಿದ ಬೆರಳುಗಳು ನೇರವಾಗಿರುವ ಹಸ್ತ 'ತ್ರಿಪತಾಕಾ'.

೧೨೭ ಅಪವಾರಿತಲಕ್ಷಣ—

**ರಹಸ್ಯಂ ಕಥ್ಯತೇಽನ್ಯಸ್ಯ ಪರಾವೃತ್ತ್ಯಾಪವಾರಿತಂ ॥ ೬೭ ॥**

**ತಾ**—ಪತ್ತೊಬ್ಬನ ಕಡೆಗೆ ತಿರುಗಿ ಗುಟ್ಟು ಹೇಳುವುದು ಅಪವಾರಿತ.

೧೨೮ ಆಕಾಶ ಭಾಷಿತ ಲಕ್ಷಣ—

**ಕಿಂಬ್ರವೀಷ್ಯೇವಮಿತ್ಯಾದಿ ವಿನಾಪಾತ್ರಂ ಬ್ರವೀತಿಯತ್ ।**
**ಶ್ರುತ್ವೇವಾನುಕ್ತಮಪ್ಯೇಕಃ ತತ್ಸ್ಯಾದಾಕಾಶಭಾಷಿತಂ ॥ ೬೭ ॥**

**ತಾ**—ಯಾವ ಪಾತ್ರವು ಬೇರೊಂದು ಪಾತ್ರವಿಲ್ಲದೆ ಏನು ಹೇಳುತ್ತೀ ? ಹೀಗೆ ಹೇಳುವೆಯೇನು ? ಮುಂತಾಗಿ ಕೇಳುವುದು, ಆ ಇಲ್ಲದ ಪಾತ್ರವು ನಿಜವಾಗಿ ಏನನ್ನೂ ಹೇಳದಿದ್ದರೂ ಏನೋ ಕೇಳಿದಂತೆ ನಟಿಸುವುದು 'ಆಕಾಶ ಭಾಷಿತ'. ಪ್ರಸಂಗವಶಾತ್ ಇಲ್ಲಿ ಆಕಾಶಭಾಷಿತಕ್ಕೆ ಲಕ್ಷಣ ಹೇಳಿದೆ.

## ಪ್ರಥಮಪ್ರಕಾಶದ ಉಪಸಂಹಾರ

೧೨೯ ವಸ್ತು ವಿಚಾರದ ಉಪಸಂಹಾರ—

**ಇತ್ಯಾದ್ಯಶೇಷಮಿಹವಸ್ತು ವಿಭೇದಜಾತಂ**
**ರಾಮಾಯಣಾದಿ ಚ ವಿಭಾವ್ಯ ಬೃಹತ್ಕಥಾಂಚ ।**
**ಆಸೂತ್ರಯೇತ್ತದನು ನೇತೃರಸಾನುಗುಣ್ಯಾತ್**
**ಚಿತ್ರಾಂಕಥಾಮುಚಿತಚಾರುವಚಃಪ್ರಪಂಚೈಃ ॥೬೮ ॥**

**ತಾ**—ಹೀಗೆ ಸಂಪೂರ್ಣವಾದ ವಸ್ತುವಿಭಾಗವನ್ನೂ, ರಾಮಾಯಣ ಮೊದಲಾದ ಇತಿಹಾಸ ಪುರಾಣಗಳನ್ನು ಮತ್ತು ಬೃಹತ್ಕಥೆಯನ್ನೂ ಪರ್ಯಾಲೋಚಿಸಿ, ಯೋಗ್ಯವಾದ, ಸುಂದರವಾದ ಮತ್ತು ವಿಸ್ತರವಾದ ವಚನಗಳಿಂದ ನಾಯಕ ಮತ್ತು ರಸಗಳಿಗೆ ಅನುರೂಪವಾಗಿ ಚಮತ್ಕಾರವಾಗಿ ಕಥೆಯನ್ನು

ಹೇಳಿಯತಕ್ಕದ್ದು. (ರಾಮಕಥೆಗಳಿರುವ ಮಹಾವೀರಚರಿತಾದಿರೂಪಕಗಳಲ್ಲಿ ರಾಮಾಯಣಕಥೆಯ ಪರ್ಯಾಲೋಚನೆಯನ್ನು, ಬೃಹತ್ಕಥಾಮೂಲಕವಾದ ಮುದ್ರಾರಾಕ್ಷಸದಲ್ಲಿ–ಅದರ ಪರ್ಯಾಲೋಚನೆಯನ್ನು ಕಾಣಬಹುದು.

ಇಲ್ಲಿಗೆ ಮೊದಲನೆಯ ಪ್ರಕಾಶವು ಮುಗಿಯಿತು.

---

# ದಶರೂಪಕಂ

## ಮೂರನೆಯ ಪ್ರಕಾಶ

## ರೂಪಕಭೇದಗಳು

೧ **ರೂಪಕಗಳಲ್ಲಿ ವಿಶಿಷ್ಟವಾದುದು ನಾಟಕ, ಅದಕ್ಕೆ ಕಾರಣ—**

**ಪ್ರಕೃತಿತ್ವಾದಥಾನ್ಯೇಷಾಂ ಭೂಯೋರಸಪರಿಗ್ರಹಾತ್ ।**
**ಸಂಪೂರ್ಣಲಕ್ಷಣತ್ವಾಚ್ಚ ಪೂರ್ವಂ ನಾಟಕ ಮುಚ್ಯತೇ ॥ ೧ ॥**

**ತಾ**—ನಾಟಕವು ಪ್ರಕರಣ, ಭಾಣ ಮುಂತಾದ ಉಳಿದ ಒಂಭತ್ತು ರೂಪಕ ಭೇದಗಳಿಗೆ ಪ್ರಕೃತಿ ಅಂದರೆ ಮೂಲರೂಪವಾಗಿದೆ. (ನಾಟಕದಲ್ಲಿನ ವಸ್ತು ನಾಯಕ ಮತ್ತು ರಸಗಳಲ್ಲಿಯೇ ಕೆಲಕೆಲವು ಬದಲಾವಣೆಗಳನ್ನು ಮಾಡುವುದರಿಂದ ಪ್ರಕರಣಾದಿರೂಪಕಗಳು ಆಗುತ್ತವೆ.) ನಾಟಕದಲ್ಲಿನ ರಸ-ಪರಿಪಾಕವು ಉಳಿದ ರೂಪಕಗಳಿಗಿಂತ ಪೂರ್ಣವಾಗಿಯೂ ಮತ್ತು ಅನೇಕ ರೂಪವಾಗಿಯೂ ಇರುತ್ತದೆ. ನಾಟಕವು ವಸ್ತು, ನಾಯಕ ಮತ್ತು ರಸಸಂಬಂಧವಾದ ಸಂಪೂರ್ಣಲಕ್ಷಣಗಳನ್ನು ಒಳಗೊಂಡಿರುತ್ತದೆ. ಆದುದರಿಂದ ಎಲ್ಲದಕ್ಕಿಂತ ಮೊದಲು ನಾಟಕದ ಬಗ್ಗೆ ವಿವೇಚಿಸಲಾಗುತ್ತದೆ.

೨ **ನಾಟಕದ ಆರಂಭ—**

**ಪೂರ್ವರಂಗಂ ವಿಧಾಯಾದೌ ಸೂತ್ರಧಾರೇ ವಿನಿರ್ಗತೇ ।**
**ಪ್ರವಿಶ್ಯತದ್ವದಪರಃ ಕಾವ್ಯಮಾಸ್ಥಾಪಯೇನ್ನಟಃ ॥ ೨ ॥**

ತಾ—ಸೂತ್ರಧಾರನು 'ಪೂರ್ವರಂಗ'ವನ್ನು ನೆರವೇರಿಸಿ ರಂಗದಿಂದ ಹೊರ ಹೊರಟಾಗ, ಇನ್ನೊಬ್ಬ ನಟನು ಅವನಂತೆಯೇ ಪ್ರವೇಶಿಸಿ ಕಾವ್ಯವನ್ನು ಪ್ರಸ್ಥಾಪಿಸಬೇಕು.

**ವಿ. ಅಂ**—ನಾಟಕದ ಪೂರ್ವದಲ್ಲಿ ರಂಜನೆ ಉಂಟು ಮಾಡುವುದಕ್ಕೆ ಎಂದರೆ ನಾಟ್ಯಶಾಲೆಗೆ 'ಪೂರ್ವರಂಗ' ಎಂದು ಹೆಸರು. (ಪೂರ್ವಂ ರಜ್ಯತೇ

ಅಸ್ಮಿನ್ನಿತಿ ಪೂರ್ವರಂಗಃ.) ನಾಟಕಕ್ಕೆ ಮೊದಲು ಮಂಗಳಾಚರಣೆ. ದೇವತಾಸ್ತವನ ಮುಂತಾದ ಕ್ರಿಯೆಗಳು ನಡೆಯಬೇಕು. ಇವುಗಳನ್ನು ಮುಗಿಸಿ ಸೂತ್ರಧಾರನು ಒಳಕ್ಕೆ ಹೋದಾಗ ಅವನಂತೆಯೇ ವೇಷಭೂಷಣಗಳನ್ನು ಧರಿಸಿರುವ ಮತ್ತೊಬ್ಬ ನಟನು ವೈಷ್ಣವ ಸ್ಥಾನಕದಿಂದ ಪ್ರವೇಶಿಸಿ ಕಾವ್ಯಾರ್ಥದ ಸ್ಥಾಪನೆಯನ್ನು ಮಾಡಬೇಕು. ಕಾವ್ಯಾರ್ಥವನ್ನು ಸೂಚಿಸಿ ಸ್ಥಾಪಿಸುವುದರಿಂದ ಅವನಿಗೆ ಸ್ಥಾಪಕನೆಂದು ಹೆಸರು. 'ವೈಷ್ಣವಸ್ಥಾನ'ವೆಂದರೆ ಪಾತ್ರಧಾರಿಯು ನಿಲ್ಲುವ ಒಂದು ಭಂಗಿ.

**೩ ಸೂಚನೆಯ ಕ್ರಮ—**

**ದಿವ್ಯಮರ್ತ್ಯೇ ಸತದ್ರೂಪೋ ಮಿಶ್ರಮನ್ಯತರಸ್ತಯೋಃ |**
**ಸೂಚಯೇದ್ವಸ್ತು ಬೀಜಂ ವಾ ಮುಖಂ ಪಾತ್ರಮಥಾಪಿ ವಾ**
**|| ೩ ||**

ತಾ—ಈ ಸ್ಥಾಪಕನು ಕಥಾವಸ್ತುವಿಗೆ ಅನುಗುಣವಾದ ವೇಷಭೂಷಣಗಳನ್ನು ಧರಿಸಿ ಪ್ರವೇಶಿಸಬೇಕು. ದಿವ್ಯ ಅಂದರೆ ದೇವತಾಸಂಬಂಧಿಯಾದ ವಸ್ತುವಾದರೆ ದಿವ್ಯರೂಪದಿಂದಲೂ, ಮರ್ತ್ಯ ಅಂದರೆ ಮಾನವಸಂಬಂಧಿ ವಸ್ತುವಾದರೆ ಮರ್ತ್ಯರೂಪದಿಂದಲೂ ಮತ್ತು ಮಿಶ್ರ ಅಂದರೆ ದಿವ್ಯಾದಿವ್ಯರಾದ ಶ್ರೀರಾಮ ಶ್ರೀಕೃಷ್ಣ ಮುಂತಾದವರಿಗೆ ಸಂಬಂಧಪಟ್ಟ ವಸ್ತುವಾದರೆ ದಿವ್ಯ, ಮರ್ತ್ಯ ಇವೆರಡರಲ್ಲಿ ಯಾವುದಾದರೂ ಒಂದು ರೂಪದಿಂದಲೂ ಪ್ರವೇಶಿಸಬೇಕು. ಹೀಗೆ ಪ್ರವೇಶಿಸಿದ ನಂತರ ಕಾವ್ಯಾರ್ಥದ ಸ್ಥಾಪನೆಯನ್ನು ಮಾಡುವ ಸಮಯದಲ್ಲಿ ರೂಪಕದ ಕಥಾವಸ್ತು ಅದರ ಬೀಜ ಮುಖ ಮತ್ತು ಪ್ರಮುಖವಾದ ಪಾತ್ರ ಇವುಗಳಲ್ಲಿ ಯಾವುದಾದರೊಂದರ ಸೂಚನೆಯನ್ನು ಮಾಡಬೇಕು.

ಉದಾ—ಮಾಯುರಾಜವಿರಚಿತ ಉದಾತ್ತರಾಘವ-ಅಪ್ರಕಟಿತ.
ರಾಮೋ ಮೂರ್ಧ್ನಿನಿಧಾಯಕಾನನ ಮಗಾನ್ಮಾಲಾಮಿವಾಜ್ಞಾಂಗುರೋಃ
ತದ್ಭಕ್ತ್ಯಾ ಭರತೇನರಾಜ್ಯಮಖಿಲಂ ಮಾತ್ರಾ ಸಹೈವೋಜ್ಝಿತಂ |
ತೌ ಸುಗ್ರೀವವಿಭೀಷಣಾವನುಗತೌ ನೀತೌ ಪರಾಂ ಸಂಪದಂ

ಪ್ರೋದ್ವೃತ್ತಾ ದಶಕಂಧರಪ್ರಭೃತಯೋ ಧ್ವಸ್ತಾಸ್ಸಮಸ್ತಾದ್ವಿಷಃ ||

ತಂದೆಯ ಆಜ್ಞೆಯನ್ನು ಮಾಲೆಯಂತೆ ಶಿರಸ್ಸಿನಲ್ಲಿ ಧರಿಸಿ ರಾಮನು ಕಾಡಿಗೆ ಹೋದನು. ಅವನ ಮೇಲಿನ ಭಕ್ತಿಯಿಂದ ಭರತನು ತನ್ನ ತಾಯಿಯನ್ನೂ, ಜೊತೆಗೆ ಸಮಸ್ತರಾಜ್ಯವನ್ನೂ ಪರಿತ್ಯಜಿಸಿದನು. ರಾಮನನ್ನು ಅನುಸರಿಸಿದ ಸುಗ್ರೀವ ವಿಭೀಷಣರು ಉತ್ತಮವಾದ ಸಂಪತ್ತನ್ನು ಹೊಂದಿದರು. ಶ್ರೀರಾಮನು ದುರ್ಜಯರಾದ ರಾವಣ ಮೊದಲಾದ ಸಮಸ್ತವೈರಿಗಳನ್ನೂ ನಾಶ ಮಾಡಿದನು.

ಬೀಜಸೂಚನೆಗೆ ಉದಾ-(ರತ್ನಾ. ೧-೬)

ದ್ವೀಪಾದನ್ಯಸ್ಮಾದಪಿ ಮಧ್ಯಾದಪಿ ಜಲನಿಧೇರ್ದಿಶೋಽಪ್ಯಂತಾತ್ |
ಆನೀಯ ಝಟಿತಿ ಘಟಯತಿ ವಿಧಿರಭಿಮತಮಭಿಮುಖೀಭೂತಃ ||

**ತಾ**—ವಿಧಿಯು ನಮಗೆ ಅನುಕೂಲವಾಗಿದ್ದಾಗ ಅದು ನಮಗೆ ಇಷ್ಟವಾದುದನ್ನು ಬೇರೊಂದು ದ್ವೀಪದಿಂದಲಾದರೂ ಅಥವಾ ಸಮುದ್ರಮಧ್ಯದಿಂದ-ಲಾದರೂ ಅಥವಾ ದಿಕ್ಕಿನ ಕೊನೆಯಿಂದಲಾದರೂ ತಂದು ಕೂಡಿಸುತ್ತದೆ.

ಮುಖಸೂಚನೆಗೆ ಉದಾ-(ಆಕರಅನುಪಲಬ್ಧ)

ಆಸಾದಿತಪ್ರಕಟನಿರ್ಮಲಚಂದ್ರಹಾಸಃ ಪ್ರಾಪ್ತಃ ಶರತ್ಸಮಯ ಏಷ ವಿಶುದ್ಧಕಾಂತಃ |
ಉತ್ಖಾಯ ಗಾಢತಮಸಂ ಘನಕಾಲಮುಗ್ರಂ ರಾಮೋದಶಾಸ್ಯಮಿವ ಸಂಭೃತಬಂಧುಜೀವಃ ||

**ತಾ**—ಶುದ್ಧನೂ, ರಮ್ಯನೂ ಆದ, ರಾವಣನ ಚಂದ್ರಹಾಸಖಡ್ಗವನ್ನು ನಾಶ ಮಾಡಿದವನಾದ, ರಾಮಚಂದ್ರನು ತನ್ನಬಂಧುಗಳನ್ನು ಉದ್ಧರಿಸಲು ತಮೋಗುಣದ ಆಧಿಕ್ಯದಿಂದ ಭಯಂಕರನೂ ಉಗ್ರನೂ ಆದ ರಾವಣನನ್ನು ನಾಶಗೊಳಿಸಿದಂತೆ, ನಿರ್ಮಲವಾದ ಚಂದ್ರಕಾಂತಿ ಪ್ರಕಟವಾಗಿರಲು, ಬಂಧುಜೀವ (ದಾಸವಾಳ) ಪುಷ್ಪವನ್ನು ಧರಿಸಿ ಬಂದ ಶುದ್ಧವೂ, ರಮ್ಯವೂ ಆದ

ಶರತ್ಕಾಲವು, ಚಂದ್ರ ಸಮಾನವಾದ ಹಾಸವು ಉಕ್ಕುತ್ತಿರಲು ಗಾಢಾಂಧಕಾರ-ಕೂಡಿದ ಭಯಂಕರವಾದ ಮತ್ತು ದಟ್ಟವಾದ ವರ್ಷಾಕಾಲವನ್ನು ನಾಶ ಮಾಡಿತು.

ಪಾತ್ರಸೂಚನೆಗೆ ಉದಾ-(ಶಾಕುಂ. ೧-೫)

ತವಾಸ್ಮಿಗೀತರಾಗೇಣ ಹಾರಿಣಾ ಪ್ರಸಭಂಹೃತಃ ।
ಏಷ ರಾಜೇವ ದುಷ್ಯಂತಃ ಸಾರಂಗೇಣಾತಿರಂಹಸಾ ॥

ತಾ—ಎಲೈ ನಟಿಯೇ, ಈ ರಾಜನಾದ ದುಷ್ಯಂತನು ಅತಿವೇಗವುಳ್ಳ ಜಿಂಕೆಯಿಂದ ಆಕೃಷ್ಟನಾದಂತೆ ನಾನು ನಿನ್ನ ಗೀತರಾಗದಿಂದ ಆಕೃಷ್ಟನಾಗಿದ್ದೇನೆ. 'ತತಃ ಪ್ರವಿಶತಿ ಮೃಗಾನುಸಾರೀ ರಾಜಾ' (ಅನಂತರ ಮೃಗವನ್ನು ಅನುಸರಿಸುತ್ತಿರುವ ದುಷ್ಯಂತರಾಜನು ಪ್ರವೇಶಿಸುತ್ತಾನೆ.)

**೪ ಸ್ಥಾಪನಾನಂತರದ ಕರ್ತವ್ಯ—**

**ರಂಗಂ ಪ್ರಸಾಧ್ಯಮಧುರೈಃ ಶ್ಲೋಕೈಃ ಕಾವ್ಯಾರ್ಥಸೂಚಕೈಃ ।**
**ಋತುಂ ಕಂಚಿದುಪಾದಾಯ ಭಾರತೀಂ ವೃತ್ತಿಮಾಶ್ರಯೇತ್ ॥ ೪ ॥**

ತಾ—ಕಾವ್ಯಾರ್ಥವನ್ನು ಸೂಚಿಸುವ ಇಂಪಾದ ಶ್ಲೋಕಗಳಿಂದ ರಂಗವನ್ನು (ಎಂದರೆ, ಸಾಮಾಜಿಕರನ್ನು) ಸಂತೋಷಪಡಿಸಿ ಯಾವುದಾದರೊಂದು ಋತುವನ್ನು ಅವಲಂಬಿಸಿ ಭಾರತೀವೃತ್ತಿಯನ್ನು ಆಶ್ರಯಿಸಬೇಕು. ಉದಾ—

ಔತ್ಸುಕ್ಯೇನ ಕೃತತ್ವರಾ ಸಹ ಭುವಾ ವ್ಯಾವರ್ತಮಾನಾ ಹ್ರಿಯಾ
ತೈಸ್ತೈರ್ಬಂಧುವಧೂಜನಸ್ಯ ವಚನೈರ್ನೀತಾಭಿಮುಖ್ಯಂ ಪುನಃ ।
ದೃಷ್ಟ್ವಾಗ್ರೇ ವರಮಾತ್ತಸಾಧ್ವಸರಸಾ ಗೌರೀನವೇ ಸಂಗಮೇ
ಸಂರೋಹತ್ಪುಲಕಾ ಹರೇಣ ಹಸತಾ ಶ್ಲಿಷ್ಟಾ ಶಿವಾ ಪಾತುವಃ ॥

(ನವಸಂಗಮದಲ್ಲಿ ಔತ್ಸುಕ್ಯದಿಂದ ತ್ವರೆಗೊಂಡು ಈಶ್ವರನ ಬಳಿ ಹೋಗಿ ಹಾಗೆಯೇ ಜತೆಗೇ ಹುಟ್ಟಿದ ಲಜ್ಜೆಯಿಂದ ಪಾರ್ವತಿಯು ಹಿಂತಿರುಗಿದಳು,

ಮತ್ತೆ ತನ್ನ ಬಂಧುಗಳು ಹಾಗೂ ಸಖಿಯರ ಮಾತುಗಳಿಂದ ಪತಿಯ ಬಳಿ ಸಾರಿದಳು. ಪತಿಯನ್ನು ಎದುರಿನಲ್ಲಿ ಕಂಡೊಡನೆ ಭೀತಳಾದಳು. ಅನಂತರ ಶಿವನು ನಗುತ್ತಾ ಆಲಿಂಗಿಸಿದಾಗ ರೋಮಾಂಚಿತಳಾದ ಶಿವೆಯು ನಿಮ್ಮನ್ನು ಕಾಪಾಡಲಿ.)

## ಭಾರತೀವೃತ್ತಿ

**೫ ಭಾರತೀಲಕ್ಷಣ—**

**ಭಾರತೀ ಸಂಸ್ಕೃತಪ್ರಾಯೋ ವಾಗ್ವ್ಯಾಪಾರೋ ನರಾಶ್ರಯಃ ।**
**ಭೇದೈಃ ಪ್ರರೋಚನಾಯುಕ್ತೈಃ ವೀಥೀ ಪ್ರಹಸನಾಮುಖೈಃ**
**॥ ೫ ॥**

**ತಾ**—ನಟನನ್ನು ಆಶ್ರಯಿಸಿದ ಸಂಸ್ಕೃತಭಾಷಾ ಪ್ರಚುರವಾದ, ಮಾತು ಕಥೆಗಳಿಗೆ ಭಾರತೀವೃತ್ತಿ ಎಂದು ಹೆಸರು. ಅದರಲ್ಲಿ ಪ್ರರೋಚನಾ, ವೀಥೀ, ಪ್ರಹಸನ, ಆಮುಖ ಎಂಬ ವಿಭಾಗಗಳಿವೆ. ಭಾರತೀವೃತ್ತಿಯನ್ನು ಬಹಳ ವಾಗಿ ಪುರುಷ ನಟರೇ ಪ್ರಯೋಗಿಸುತ್ತಾರೆ.

**೬ ಪ್ರರೋಚನಾಲಕ್ಷಣ—**

**ಉನ್ಮುಖೀಕರಣಂ ತತ್ರ ಪ್ರಶಂಸಾತಃ ಪ್ರರೋಚನಾ ।**

**ತಾ**—ಆಭಾರತೀವೃತ್ತಿಯಲ್ಲಿ ಕಾವ್ಯಾರ್ಥದ ಪ್ರಶಂಸೆಯ ಮೂಲಕವಾಗಿ ಸಾಮಾಜಿಕರ ಮನಸ್ಸನ್ನು ಕಾವ್ಯದತ್ತ ಉತ್ಸುಕವನ್ನಾಗಿ ಮಾಡುವುದು '**ಪ್ರರೋಚನಾ**'.

ಉದಾ—(ರತ್ನಾ. ೧-೫)
ಶ್ರೀಹರ್ಷೋ ನಿಪುಣಃ ಕವಿಃ ಪರಿಷದಪ್ಯೇಷಾ ಗುಣಗ್ರಾಹಿಣೀ
ಲೋಕೇ ಹಾರಿ ಚ ವತ್ಸರಾಜ ಚರಿತಂ ನಾಟ್ಯೇ ಚ ದಕ್ಷಾವಯಂ ।
ವಸ್ತ್ವೇಕೈಕಮಪೀಹ ವಾಂಛಿತಫಲಪ್ರಾಪ್ತೇಃ ಪದಂ ಕಿಂ ಪುನಃ
ಮದ್ಭಾಗ್ಯೋಪಚಯಾದಯಂ ಸಮುದಿತಃ ಸರ್ವೋಗುಣಾನಾಂಗಣಃ ॥

(ನಿಪುಣನಾದ ಶ್ರೀಹರ್ಷನು ಕವಿ; ಗುಣಜ್ಞರಾದ ಸಹೃದಯರಿಂದ ಕೂಡಿದ ಸಭೆಯಿದು. ಲೋಕದ ಚಿತ್ತವನ್ನು ಸೆಳೆಯುವ ವತ್ಸರಾಜನ ಚರಿತೆಯೇ ಕಥೆ; ನಾವೂ ನಾಟ್ಯಕಲೆಯಲ್ಲಿ ದಕ್ಷರು; ಇಷ್ಟ ಫಲಪ್ರಾಪ್ತಿಯಾಗಲು ಇವುಗಳಲ್ಲಿ ಒಂದೊಂದೇ ಸಾಕು. ನನ್ನ ಭಾಗ್ಯೋದಯದಿಂದ ಎಲ್ಲ ಗುಣಗಳೂ ಸೇರಿರುವಾಗ ಮತ್ತೇನು ಹೇಳತಕ್ಕದ್ದು.)

೭ ವೀಥಿಯ ಅಂಗಗಳು—

**ವೀಥೀ ಪ್ರಹಸನಂಚಾಪಿ ಸ್ವಪ್ರಸಂಗೇಽಭಿಧಾಸ್ಯತೇ || ೬ ||**
**ವೀಥ್ಯಂಗಾನ್ಯಾಮುಖಾಂಗತ್ವಾದುಚ್ಯಂತೇಽತ್ರೈವತತ್ಪುನಃ |**

ತಾ—ವೀಥೀ ಮತ್ತು ಪ್ರಹಸನಗಳನ್ನು ಅಯಾ ಪ್ರಸಂಗಗಲ್ಲಿ ಹೇಳಲಾಗುವುದು. ಆದರೂ ವೀಥಿಯ ಅಂಗಗಳು ಆಮುಖದ ಅಂಗಗಳೂ ಆಗಿರುವ ಕಾರಣ ಅವುಗಳನ್ನು ಇಲ್ಲಿ ಹೇಳಲಾಗುತ್ತದೆ.

## 'ಆಮುಖ'ದ ವಿವರಗಳು

೮ **ಆಮುಖಲಕ್ಷಣ—**

**ಸೂತ್ರಧಾರೋ ನಟೀಂ ಬ್ರೂತೇ ಮಾರ್ಷಂವಾऽಥವಿದೂಷಕಮ್ || ೭ ||**
**ಸ್ವಕಾರ್ಯಂ ಪ್ರಸ್ತುತಾಕ್ಷೇಪಿ ಚಿತ್ರೋಕ್ತ್ಯಾಯತ್ತದಾ-ಮುಖಮ್ |**
**ಪ್ರಸ್ತಾವನಾವಾ—**

ತಾ—ಸೂತ್ರಧಾರನು ನಟೀ, ಮಾರಿಷ (ಮಾರ್ಷ) ಅಥವಾ ವಿದೂಷಕನನ್ನು ಕುರಿತು ಸುಂದರವಾದ ಮತ್ತು ಚತುರವಾದ ಮಾತುಗಳಿಂದ ಪ್ರಸ್ತುತವಾದ ವಿಷಯವನ್ನು ಸೂಚಿಸುವುದರ ಮೂಲಕ ತನ್ನ ಕಾರ್ಯವನ್ನು ಎತ್ತಿ ಹೇಳುತ್ತಾನೆ. ಇದೇ 'ಆಮುಖ' ಅಥವಾ 'ಪ್ರಸ್ತಾವನಾ', (ಸೂತ್ರಧಾರನ ಸಹಾಯಕ ನಟನೇ ಮಾರ್ಷ ಅಥವಾ ಮಾರಿಷ. ಇವನಿಗೇ ಪಾರಿಪಾರ್ಶ್ವಿಕ ಎಂದೂ ಹೆಸರು.)

೯ ಆಮುಖದ ಅಂಗಗಳು—

**ತತ್ರಾಸ್ಯಃ ಕಥೋದ್ಘಾತಃ ಪ್ರವೃತ್ತಕಮ್ ॥ ೮ ॥**
**ಪ್ರಯೋಗಾತಿಶಯಶ್ಚಾಥ ವೀಥ್ಯಂಗಾನಿ ತ್ರಯೋದಶ ।**

ತಾ—ಅಲ್ಲಿ ಅಂದರೆ ಆಮುಖದಲ್ಲಿ ಕಥೋದ್ಘಾತ, ಪ್ರವೃತ್ತಕ ಮತ್ತು ಪ್ರಯೋಗಾತಿಶಯವೆಂಬ ಮೂರು ಅಂಗಗಳಿರುತ್ತವೆ. ವೀಥಿಯಲ್ಲಿ ಹದಿಮೂರು ಅಂಗಗಳು.

೧೦ ಕಥೋದ್ಘಾತಲಕ್ಷಣ—

**ಸ್ವೇತಿವೃತ್ತಸಮಂ ವಾಕ್ಯಮರ್ಥಂ ವಾಯತ್ರಸೂತ್ರಿಣಃ ॥ ೯ ॥**
**ಗೃಹೀತ್ವಾ ಪ್ರವಿಶೇತ್ ಪಾತ್ರಂ ಕಥೋದ್ಘಾತೋದ್ವಿಧೈವಸಃ ।**

ತಾ—ರೂಪಕದ ಇತಿವೃತ್ತಕ್ಕೆ ಸಮಾನವಾದ ಯಾವುದಾದರೊಂದು ವಾಕ್ಯವನ್ನು ಅಥವಾ ಅರ್ಥವನ್ನು ಸೂತ್ರಧಾರನು ಹೇಳುವಾಗ ಅದನ್ನೇ ಹಿಡಿದು ರೂಪಕದ ಯಾವುದಾದರೊಂದು ಪಾತ್ರವು ರಂಗಮಂಚವನ್ನು ಪ್ರವೇಶಿಸುವುದು ಕಥೋದ್ಘಾತ; ಅದು ಕಥೆಗೆ ಹೊಂದುವ ವಾಕ್ಯವನ್ನು ಹಿಡಿದು ಅದನ್ನು ಪುನರುಚ್ಚರಿಸುತ್ತ ಪ್ರವೇಶಿಸುವುದು, ಅಥವಾ ಕಥೆಗೆ ಹೊಂದುವ ಅರ್ಥವನ್ನು ಹಿಡಿದು ಅದನ್ನು ಉಚ್ಚರಿಸುತ್ತ ಪ್ರವೇಶಿಸುವುದು ಹೀಗೆ ಎರಡು ವಿಧ.

ಉದಾ—ಸಮಾನ ವಾಕ್ಯ ಪ್ರಯೋಗ ರತ್ನಾ(೧–೬) ದ್ವೀಪಾದನ್ಯಸ್ಮಾದಪಿ ಎಂದು ಸೂತ್ರಧಾರನು ಹೇಳಿ ಮುಗಿಸಿದ ಕೂಡಲೇ ನೇಪಥ್ಯದಿಂದ ಯೌಗಂಧರಾಯಣನು ಇದೇ ಶ್ಲೋಕವನ್ನು ಪುನರುಚ್ಚರಿಸುತ್ತಾನೆ.

ಸಮಾನವಾಕ್ಯಾರ್ಥಕ್ಕೆ ವೇ. ೧–೭. ಸೂತ್ರಧಾರ–ನಿರ್ವಾಣವೈರ–ದಹನಾಃ ಪ್ರಶಮಾದರೀಣಾಂ ನಂದಂತು ಪಾಂಡುತನಯಾಃ ಸಹಮಾಧವೇನ । ರಕ್ತಪ್ರಸಾಧಿತಭುವಃಕ್ಷತವಿಗ್ರಹಾಶ್ಚ ಸ್ವಸ್ಥಾಭವಂತು ಕುರುರಾಜಸುತಾಃ ಸಭೃತ್ಯಾಃ ॥

(ವೈರಾಗ್ನಿಯು ಆರಿ ಶತ್ರುಗಳು ಶಾಂತವಾದಾಗ ಪಾಂಡವರು ಕೇಶವ ನೊಡನೆ ಆನಂದಿಸಲಿ, ಭೃತ್ಯಸಹಿತರಾದ ಕೌರವರು ಅನುರಕ್ತವಾದ ಜಗತ್ತನ್ನು ಪ್ರಸನ್ನಗೊಳಿಸಿ, ಯುದ್ಧಪ್ರಸಕ್ತಿಯನ್ನು ಬಿಟ್ಟು ಸ್ವಸ್ಥರಾಗಲಿ. ಅಥವಾ ಕೌರವರು ದೇಹಚ್ಛೇದವನ್ನು ಹೊಂದಿ, ತಮ್ಮ ರಕ್ತದಿಂದ ನೆಲವನ್ನು ತೊಯಿಸಿ ನಾಶವಾಗಲಿ.)

ಅನಂತರ, ಭೀಮಃ–ಲಾಕ್ಷಾಗೃಹಾನಲವಿಷಾನ್ನಸಭಾಪ್ರವೇಶೈಃ ಪ್ರಾಣೇಷು- ವಿತ್ತನಿಚಯೇಷುಚನಃ ಪ್ರಹೃತ್ಯ। ಆಕೃಷ್ಟಪಾಂಡವವಧೂಪರಿಧಾನಕೇಶಾಃ ಸ್ವಸ್ಥಾಭವಂತು ಮಯಿಜೀವತಿಧಾರ್ತರಾಷ್ಟ್ರಾಃ ||

[ಅರಗಿನ ಮನೆಯ ಬೆಂಕಿಯಿಂದ, ವಿಷಾನ್ನದಿಂದ, ಜೂಜಾಟದಿಂದ ನಮ್ಮ ಪ್ರಾಣ, ಮತ್ತು ಸಂಪತ್ತುಗಳನ್ನು ಅಪಹರಿಸಲು ಪ್ರಯತ್ನಿಸಿ ದ್ರೌಪದಿಯ ಸೀರೆಯನ್ನೇ ಸೆಳೆದ ಧೃತರಾಷ್ಟ್ರನ ಮಕ್ಕಳು ನಾನು ಬದುಕಿರುವಾಗ ಸ್ವಸ್ಥರಾಗಿರುವರೇ ?]

೧೧ ಪ್ರವೃತ್ತಕಲಕ್ಷಣ—

**ಕಾಲಸಾಮ್ಯಸಮಾಕ್ಷಿಪ್ತಪ್ರವೇಶಃ ಸ್ಯಾತ್ ಪ್ರವೃತ್ತಕಮ್ ||೧೧||**

**ತಾ**—ಪಾತ್ರದ ಪ್ರವೇಶವು ಋತುವರ್ಣನೆಯಲ್ಲಿ ಸಮಾನವಾಗಿ ಸೂಚಿಸಲ್ಪಟ್ಟರೆ ಅದು 'ಪ್ರವೃತ್ತಕ'.

ಉದಾ—ಆಸಾದಿತ ಇತ್ಯಾದಿ. [ಇದೇ ಪ್ರಕಾಶದ ವಿಭಾಗ ೩. **ಸೂಚನೆಯ ಕ್ರಮ** ಎಂಬಲ್ಲಿ ಬಂದಿದೆ.] ಈಶ್ಲೋಕದ ಅನಂತರ, ತತಃ ಪ್ರವಿಶತಿ ಯಥಾನಿರ್ದಿಷ್ಟೋರಾಮಃ–[ಅನಂತರ ಹಿಂದೆ ನಿರ್ದೇಶಿಸಿದ ರಾಮನು ಪ್ರವೇಶಿಸುತ್ತಾನೆ.] ಎಂದು ರಾಮನ ಪ್ರವೇಶವನ್ನು ಹೇಳಿದೆ. ಸಾಹಿತ್ಯ ದರ್ಪಣದಲ್ಲಿ ಪ್ರವೃತ್ತಕಕ್ಕೆ ಪ್ರವರ್ತಕವೆಂದೂ ಹೆಸರಿದೆ.

೧೨ ಪ್ರಯೋಗಾತಿಶಯಲಕ್ಷಣ—

**ಏಷೋಽಯಮಿತ್ಯುಪಕ್ಷೇಪಾತ್ ಸೂತ್ರಧಾರ ಪ್ರಯೋಗತಃ ।**
**ಪಾತ್ರಪ್ರವೇಶೋ ಯತ್ರೈಷಪ್ರಯೋಗಾತಿಶಯೋ ಮತಃ ||೧೧||**

ತಾ—'ಇದೋ ಈ ಇವನು' ಎಂದು ಸೂತ್ರಧಾರನು ಮಾತನ್ನು ಹೇಳು ತ್ತಿರುವಾಗ ಪಾತ್ರ ಪ್ರವೇಶವಾಗುವುದು 'ಪ್ರಯೋಗಾತಿಶಯ'.

ಉದಾ—(ಶಾಕುಂ) ತವಾಸ್ಮಿ ಗೀತರಾಗೇಣ.... । (ಪ್ರಕಾಶ ೩, ೩ನೆಯ ವಿಭಾಗದಲ್ಲಿ ಉದಾಹೃತವಾಗಿದೆ.) ಈ ಶ್ಲೋಕದ ಅನಂತರ ದುಷ್ಯಂತನು ಪ್ರವೇಶಿ ಸುತ್ತಾನೆ.

## ವೀಥಿಯ ಅಂಗಗಳು

೧೩ ಹದಿಮೂರು ವೀಥ್ಯಂಗಗಳು—

**ಉದ್ಘಾತ್ಯಕಾವಲಗಿತೇ ಪ್ರಪಂಚತ್ರಿಗತೇ ಛಲಮ್ ।**
**ವಾಕ್ಕೇಲ್ಯಧಿಬಲೇ ಗಂಡಮವಸ್ಯಂದಿತನಾಲಿಕೇ ॥ ೧೨ ॥**
**ಅಸತ್ಪ್ರಲಾಪವ್ಯಾಹಾರ ಮೃದವಾನಿ ತ್ರಯೋದಶ ।**

ತಾ—ವೀಥಿಯ ಅಂಗಗಳು ೧೩, ಉದ್ಘಾತ್ಯಕ, ಅವಲಗಿತ, ಪ್ರಪಂಚ, ತ್ರಿಗತ, ಛಲ, ವಾಕ್ಕೇಲಿ, ಅಧಿಬಲ, ಗಂಡ, ಅವಸ್ಯಂದಿತ, ನಾಲಿಕಾ, ಅಸತ್ಪ್ರಲಾಪ, ವ್ಯಾಹಾರ, ಮೃದವ.

೧೪ ಉದ್ಘಾತ್ಯಕಲಕ್ಷಣ—

**ಗೂಢಾರ್ಥ ಪದಪರ್ಯಾಯಮಾಲಾ ಪ್ರಶ್ನೋತ್ತರಸ್ಯವಾ ॥೧೩॥**
**ಯತ್ರಾನ್ಯೋನ್ಯಂ ಸಮಾಲಾಪೋ ದ್ವೇಧೋದ್ಘಾತ್ಯಂ**
**ತದುಚ್ಯತೇ ।**

ತಾ—ಪಾತ್ರಗಳ ಪರಸ್ಪರವಾದ ಮಾತುಕತೆಯಲ್ಲಿ, ರಹಸ್ಯವಾದ ಅರ್ಥ-ವುಳ್ಳ ಪದಗಳು ಮರುಕೊಳಿಸುತ್ತಿದ್ದರೆ ಅಥವಾ ಪ್ರಶ್ನೋತ್ತರಮಾಲೆಗಳಿದ್ದರೆ 'ಉದ್ಘಾತ್ಯಕ' ಅಗುತ್ತದೆ.

ಉದಾ—ಗೂಢಾರ್ಥಪದಪರ್ಯಾಯಮಾಲಾ—(ವಿಕ್ರಮೋರ್ವಶೀಯಂ)

ವಿದೂಷಕಃ—ಭೋ ವಯಸ್ಯ, ಕ ಏಷ ಕಾಮಃ ಯೇನ ತ್ವಮಪಿ

ದೂಷ್ಯಸೇ ? ಸ ಕಿಂ ಪುರುಷಃ ಉತಸ್ತ್ರೀ ? (ಎಲೈ ಮಿತ್ರ ನಿನ್ನನ್ನು ಖೇದ ಗೊಳಿಸುವ ಆ ಕಾಮ ಯಾರು ? ಗಂಡೋ ಹೆಣ್ಣೋ ?)

ರಾಜಾ—ಸಖೇ,

ಮನೋಜಾತಿರನಾಧೀನಾ ಸುಖೇಷ್ವೇವ ಪ್ರವರ್ತತೇ ।
ಸ್ನೇಹಸ್ಯ ಲಲಿತೋ ಮಾರ್ಗಃ ಕಾಮ ಇತ್ಯಭಿಧೀಯತೇ ॥

(ಸ್ನೇಹಿತನೇ, ಮನಸ್ಸಿನಲ್ಲಿಯೇ ಹುಟ್ಟಿ ಕೇವಲ ಸುಖಗಳಲ್ಲಿಯೇ ಪ್ರವರ್ತಿಸುವ ಸ್ನೇಹದ ಸುಂದರ ಮಾರ್ಗವನ್ನು ಕಾಮ ಎನ್ನುತ್ತಾರೆ.)

ವಿದೂಃ—ಏವಮಪಿ ನ ಜಾನೇ. (ಹೀಗೆ ಹೇಳಿದರೂ ನನಗೆ ತಿಳಿಯು ವುದಿಲ್ಲ.)

ರಾಜಾ—ವಯಸ್ಯ, ಇಚ್ಛಾಪ್ರಭವಃ ಸ ಇತಿ. (ಮಿತ್ರ, ಇಚ್ಛೆಯಿಂದ ಹುಟ್ಟುವವನೇ ಕಾಮನು.)

ವಿದೂಃ—ಕಿಂ ಯಃ ಯದಿಚ್ಛತಿ, ಸಃ ತಸ್ಯ ಕಾಮ ಇತಿ. (ಹಾಗಾದರೆ ಯಾವನು ಯಾವುದನ್ನು ಇಚ್ಛಿಸುತ್ತಾನೋ ಅದು ಅವನ ಕಾಮವೋ ?)

ರಾಜಾ—ಅಥ ಕಿಂ (ಮತ್ತೇನು ?)

ವಿದೂಃ—ತತ್ ಜ್ಞಾತಂ. ಯಥಾ ಅಹಂ ಸೂಪರಸಶಾಲಾಯಾಂ ಭೋಜನಂ ಇಚ್ಛಾಮಿ. (ಹಾಗಾದರೆ ತಿಳಿಯಿತು. ನಾನು ಅಡಿಗೆ ಮನೆ ಯಲ್ಲಿ ಊಟವನ್ನು ಬಯಸುವಂತೆ.)

ಉದಾ—ಪ್ರಶ್ನೋತ್ತರಮಾಲಾ (ಪಾಂಡವಾನಂದ)

ಕಾ ಶ್ಲಾಘ್ಯಾ ? ಗುಣಿನಾಂ ಕ್ಷಮಾ. ಪರಿಭವಃ ಕೋ ? ಯಃ ಸ್ವಕುಲ್ಯೈಃ ಕೃತಃ.

ಕಿಂ ದುಃಖಂ ? ಪರಸಂಶ್ರಯೋ, ಜಗತಿಕಃ ಶ್ಲಾಘ್ಯೋ ? ಯ ಆಶ್ರೀಯತೇ.

ಕೋ ಮೃತ್ಯುಃ ? ವ್ಯಸನಂ, ಶುಚಂಜಹತಿ ಕೇ ? ಯೈರ್ನಿರ್ಜಿತಾಃ ಶತ್ರವಃ
ಕೈರ್ವಿಜ್ಞಾತಮಿದಂ ?  ವಿರಾಟನಗರೇ ಛನ್ನಸ್ಥಿತೈಃ ಪಾಂಡವೈಃ ||

(ಶ್ಲಾಘ್ಯವಾದುದು ಯಾವುದು ? ಗುಣವಂತರ ಕ್ಷಮೆ. ಅವಮಾನ ಯಾವುದು ? ತನ್ನ ಕುಲದವರಿಂದ ಉಂಟಾದ ತಿರಸ್ಕಾರ. ದುಃಖ ಯಾವುದು ? ಪರಾಶ್ರಯ. ಯಾರು ಪ್ರಶಂಸನೀಯನು ? ಇತರರಿಗೆ ಆಶ್ರಯದಾತನು. ಮೃತ್ಯು ಯಾವುದು ? ವ್ಯಸನ. ಯಾರು ಶೋಕವನ್ನು ಬಿಡುತ್ತಾರೆ ? ಶತ್ರುಗಳನ್ನು ನಿಗ್ರಹಿಸಿದವರು. ಇದನ್ನೆಲ್ಲ ತಿಳಿದವರು ಯಾರು ? ವಿರಾಟನಗರದಲ್ಲಿ ಅಜ್ಞಾತರಾಗಿರುವ ಪಾಂಡವರು.)

**೧೫ ಅವಲಗಿತಲಕ್ಷಣ—**

**ಯತ್ರೈಕತ್ರ ಸಮಾವೇಶಾತ್ ಕಾರ್ಯಮನ್ಯತ್ರ ಸಾಧ್ಯತೇ**
**|| ೧೪ ||**

**ಪ್ರಸ್ತುತೇಽನ್ಯತ್ರವಾನ್ಯತ್ಸ್ಯಾತ್ ತಚ್ಚಾವಲಗಿತಂದ್ವಿಧಾ |**

**ತಾ**—ಒಂದೆಡೆಯಲ್ಲಿ, ಒಂದು ಸಮಾವೇಶ (ಕಾರ್ಯ)ದಿಂದ ಮತ್ತೊಂದು ಕಾರ್ಯವನ್ನು ಸಾಧಿಸುವುದು; ಇನ್ನೊಂದೆಡೆಯಲ್ಲಿ ಯಾವುದು ಪ್ರಸ್ತುತ ಕಾರ್ಯವಲ್ಲವೋ ಅದಲ್ಲದೆ ಬೇರೊಂದು ಕಾರ್ಯವು ಸಾಧಿಸಲ್ಪಡುವುದು, ಹೀಗೆ ಅವಲಗಿತವು ಎರಡು ವಿಧ.

ಉದಾ—ಮೊದಲನೆಯದಕ್ಕೆ-(ಉತ್ತರರಾಮಚರಿತ) ಸೀತೆಗೆ ವನವಿಹಾರದ ಬಯಕೆ ಇರುವಾಗ, ಅದೇ ಉದ್ದೇಶದಿಂದ ವನಕ್ಕೆ ಕೊಂಡೊಯ್ದು ಜನಾಪವಾದದ ಕಾರಣಕ್ಕಾಗಿ ಅಲ್ಲೇ ಅವಳ ಪರಿತ್ಯಾಗ. ಇಲ್ಲಿ ಒಂದು ಕ್ರಿಯೆಯ ಮೂಲಕ ಮತ್ತೊಂದನ್ನು ಸಾಧಿಸಲಾಗಿದೆ.

ಉದಾ—ಎರಡನೆಯದಕ್ಕೆ-( ಛಲಿತರಾಮ-ಅಪ್ರಕಟಿತ ) ರಾಮ :— ಲಕ್ಷ್ಮಣ, ತಾತವಿಯುಕ್ತಾಮಯೋಧ್ಯಾಂವಿಮಾನಸ್ಥೋನಾಹಂ ಪ್ರವೇಷ್ಟುಂ ಶಕ್ನೋಮಿ. ತದನತೀರ್ಯ ಗಚ್ಛಾಮಿ (ವಿಲೋಕ್ಯ).

ಕೋऽಪಿ ಸಿಂಹಾಸನಸ್ಯಾಧಃ ಸ್ಥಿತಃ ಪಾದುಕಯೋಃ ಪುರಃ |
ಜಟಾವಾನಕ್ಷಮಾಲೀ ಚ ಚಾಮರೀ ಚ ವಿರಾಜತೇ ||

(ಲಕ್ಷ್ಮಣ, ತಂದೆಯಿಲ್ಲದ ಅಯೋಧ್ಯೆಯನ್ನು ವಿಮಾನಸ್ಥನಾಗಿ ನಾನು ಪ್ರವೇಶಿಸಲಾರೆ. ಆದ್ದರಿಂದ ಇಳಿದೇ ಹೋಗುತ್ತೇನೆ. (ನೋಡಿ)ಯಾವನೋ ಒಬ್ಬನು ಸಿಂಹಾಸನದ ಕೆಳಗೆ ಪಾದುಕೆಗಳ ಎದುರು ಜಟಾಧಾರಿಯಾಗಿ ಅಕ್ಷಮಾಲೆ ಗಳನ್ನು ಧರಿಸಿ ಚಾಮರ ಹಿಡಿದು ವಿರಾಜಿಸುತ್ತಾನೆ. ಇವನಾರು ?)

ಇಲ್ಲಿ ರಾಮಾಗಮನದಿಂದ ಭರತದರ್ಶನ ಕಾರ್ಯವು ಸಿದ್ಧಿಸುತ್ತದೆ.

೧೬ ಪ್ರಪಂಚಲಕ್ಷಣ—

**ಅಸದ್ಭೂತಂ ಮಿಥಃ ಸ್ತೋತ್ರಂ ಪ್ರಪಂಚೋಹಾಸ್ಯಕೃನ್ಮತಃ**
**|| ೧೫ ||**

**ತಾ**—ಹಾಸವನ್ನುಂಟು ಮಾಡುವ ಪರಸ್ಪರವಾದ ಸುಳ್ಳು ಹೊಗಳಿಕೆಯು 'ಪ್ರಪಂಚ'.

ಉದಾ—(ಕರ್ಪೂರಮಂಜರೀ) ರಂಡಾ ಚಂಡಾ ದೀಕ್ಷಿತಾ ಧರ್ಮದಾರಾ ಮದ್ಯಂ ಮಾಂಸಂ ಪೀಯತೇ ಖಾದ್ಯತೇ ಚ| ಭಿಕ್ಷಾ ಭೋಜ್ಯಂ ಚರ್ಮ-ಖಂಡಂ ಚ ಶಯ್ಯಾ ಕೌಲೋ ಧರ್ಮಃಕಸ್ಯನೋ ಭವತಿ ರಮ್ಯಃ ||

(ವಿಧವೆಯಾದ ದೀಕ್ಷಿತಳಾದ ಚಂಡಿಯು ಧರ್ಮಪತ್ನಿ, ಮದ್ಯಪಾನ, ಮಾಂಸ ಭಕ್ಷಣ, ಭಿಕ್ಷೆಯ ಭೋಜನ, ಚರ್ಮದ ಚೂರು ಹಾಸಿಗೆ, ಈ ನನ್ನ ಪಾಶುಪತ ಧರ್ಮವು ಯಾರಿಗೆ ರಮ್ಯವೆನಿಸದು ?)

೧೭ ತ್ರಿಗತಲಕ್ಷಣ—

**ಶ್ರುತಿಸಾಮ್ಯಾದನೇಕಾರ್ಥಯೋಜನಂ ತ್ರಿಗತಂತ್ವಿಹ |**

**ತಾ**—ಶಬ್ದದ ಸಾಮ್ಯದಿಂದ ಯಾವುದಾದರೊಂದರಲ್ಲಿ ಅನೇಕ ಅರ್ಥ ಗಳನ್ನು ಯೋಜಿಸುವುದು — 'ತ್ರಿಗತ'. ನಟನಟೀಪಾರಿಪಾರ್ಶ್ವಿಕ, ಈ

ಮೂವರ ಮಾತುಕಥೆಯ ರೂಪದಲ್ಲಿ 'ತ್ರಿಗತ'ವು ಪೂರ್ವರಂಗದಲ್ಲಿ ಇರಬಹು ದಾಗಿದೆ.

ಉದಾ—( ವಿಕ್ರಮ ) ಮತ್ತಾನಾಂ ಕುಸುಮರಸೇನ ಷಟ್ಪದಾನಾಂ ಶಬ್ದೋಽಯಂ ಪರಭೃತನಾದ ಏಷ ಧೀರಃ । ಕೈಲಾಸೇ ಸುರಗಣಸೇವಿತೇ ಸಮಂತಾತ್ ಕಿನ್ನರ್ಯಃ ಕಲಮಧುರಾಕ್ಷರಂ ಪ್ರಗೀತಾಃ ॥

(ಕುಸುಮರಸದಿಂದ ಮದಿಸಿದ ದುಂಬಿಗಳ ಝೇಂಕಾರವಿದು ; ಇದು ಕೋಗಿಲೆಗಳ ಗಂಭೀರನಾದ ; ಸುತ್ತಲೂ ದೇವಗಣಗಳಿಂದ ಸೇವಿತವಾದ ಕೈಲಾಸದಲ್ಲಿ ಕಿನ್ನರಿಯರ ಮೃದು ಮಧುರವಾದ ಹಾಡುಗಳು ಹೀಗಿವೆ.)

೧೪ ಛಲಲಕ್ಷಣ—

**ಪ್ರಿಯಾಭೈರಪ್ರಿಯೈರ್ವಾಕ್ಯೈರ್ವಿಲೋಭ್ಯಛಲನಾಚ್ಛಲಮ್ ।**

**ತಾ**—ಎದುರಿಗೆ ಪ್ರಿಯವಾಗಿರುವಂತೆ ತೋರುವ ಅಪ್ರಿಯ ವಾಕ್ಯಗಳಿಂದ ವಿಲೋಭಗೊಳಿಸಿ ಪ್ರತಿ ಪಕ್ಷಿಯಲ್ಲಿ ಛಲವನ್ನುಂಟುಮಾಡುವುದು—ಛಲ.

ಉದಾ—(ವೇಣೀ, ಅಂ. ೫. ಶ್ಲೋ. ೨೬) ಭೀಮಾರ್ಜುನರು :—

ಕರ್ತಾ ದ್ಯೂತಚ್ಛಲಾನಾಂ ಜತುಮಯಶರಣೋದ್ದೀಪನಃ ಸೋಽಭಿಮಾನೀ
ರಾಜಾ ದುಃಶಾಸನಾದೇರ್ಗುರುರನುಜಶತಸ್ಯಾಂಗರಾಜಸ್ಯ ಮಿತ್ರಂ ।
ಕೃಷ್ಣಾ ಕೇಶೋತ್ತರೀಯವ್ಯಪನಯನಪಟುಃ ಪಾಂಡವಾ ಯಸ್ಯ ದಾಸಾಃ
ಕ್ವಾಸ್ತೇ ದುರ್ಯೋಧನೋಽಸೌ ಕಥಯತ ಪುರುಷಾಃ ದ್ರಷ್ಟುಮ
ಭ್ಯಾಗತೌ ಸ್ವಃ ॥

(ಜೂಜಿನಲ್ಲಿ ವಂಚಕನು, ಅರಗಿನ ಮನೆಗೆ ಬೆಂಕಿ ಹಚ್ಚಿಸಿದವನು, ದುಶ್ಶಾಸನ ಮುಂತಾದ ನೂರು ಮಂದಿ ತಮ್ಮಂದಿರ ಗುರು, ಕರ್ಣನ ಮಿತ್ರ, ದ್ರೌಪದಿಯ ಕೇಶ ಉತ್ತರೀಯಗಳನ್ನು ಸೆಳೆಸಿದ ಚತುರ, ಪಾಂಡವರ ಸ್ವಾಮಿ- 'ಎಲೈ ಪುರುಷರೇ !- ಆ ಅಭಿಮಾನಿ ರಾಜ ದುರ್ಯೋಧನನು ಎಲ್ಲಿ ? ಹೇಳಿ,' ನಾವಿಬ್ಬರು ಆತನನ್ನು ನೋಡಲು ಬಂದಿದ್ದೇವೆ.

೧೯ ವಾಕ್ಕೇಲಿಲಕ್ಷಣ—

ವಿನಿವೃತ್ತ್ಯಸ್ಯವಾಕ್ಕೇಲೀ ದ್ವಿಸ್ತ್ರಿಃ ಪ್ರತ್ಯುಕ್ತಿತೋಽಪಿವಾ
॥ ೧೭ ॥

ತಾ—ಅರ್ಥಪೂರ್ಣವಾದ ಮಾತನ್ನು ಮಧ್ಯದಲ್ಲಿ ನಿಲ್ಲಿಸುವುದು, ಅಥವಾ ಎರಡುಮೂರು ಬಾರಿ ಪ್ರತ್ಯುತ್ತರ ಕೊಡುವುದು ಇವೆರಡೂ 'ವಾಕ್ಕೆಲಿ'.

ಉದಾ—ಮೊದಲನೆಯದು (ಉತ್ತರ ೩—೨೬) ವಾಸಂತೀ—

ತ್ವಂ ಜೀವಿತಂ ತ್ವಮಸಿಮೇ ಹೃದಯಂ ದ್ವಿತೀಯಂ ತ್ವಂ ಕೌಮುದೀ ನಯನಯೋರಮೃತಂ ತ್ವಮಂಗೇ। ಇತ್ಯಾದಿಭಿಃ ಪ್ರಿಯಶತೈರನುರುಧ್ಯ ಮುಗ್ಧಾಂ ತಾಮೇವ ಶಾಂತಮಥವಾ ಕಿಮತಃ ಪರೇಣ ॥

(ನೀನೆ ನನ್ನ ಜೀವ, ನೀನೆ ನನ್ನ ದ್ವಿತೀಯ ಹೃದಯ, ನೀನೇ ನನ್ನ ಕಣ್ಣುಗಳಿಗೆ ಬೆಳದಿಂಗಳು, ನೀನೆ ನನ್ನ ಅಂಗಗಳಿಗೆ ಅಮೃತ, ಹೀಗೆ ಪ್ರಿಯವಾದ ನೂರು ಮಾತುಗಳಿಂದ ಮುಗ್ಧೆಯನ್ನು ಆದರಿಸಿ ಅವಳನ್ನೇ....(ಕಾಡಿನಲ್ಲಿ ಬಿಟ್ಟೆ ಎಂಬ ಮುಂದಿನ ಅಂಶ ಸೂಚ್ಯವಾಗಿದೆ) ಸಾಕು ಮುಂದಿನ ವಿಚಾರ ಏಕೆ ?)

ಉದಾ ಎರಡನೆಯದಕ್ಕೆ, (ರತ್ನಾ) ವಿದೂ :— ಭವತಿ ಮದನಿಕೇ ! ಮಾಮಪಿ ಏತಾಂ ಚರ್ಚರೀಂ ಶಿಕ್ಷಯ. (ಎಲೈ ಮದನಿಕೇ, ನನಗೂ ಈ ಚರ್ಚರೀ ರಾಗವನ್ನು ಕಲಿಸು.)

ಮದನಿಕಾ—ಹತಾಶ, ನಖಲು ಏಷಾ ಚರ್ಚರೀ, ದ್ವಿಪದೀಖಂಡಕಂಖಲು ಏತತ್. (ಹತಾಶನೇ, ಇದು ಚರ್ಚರೀ ರಾಗವಲ್ಲ, ದ್ವಿಪದೀಖಂಡಕ.)

ವಿದೂ :— ಭವತಿ, ಕಿಮೇತೇನ ಮೋದಕಾಃ ಕ್ರಿಯಂತೇ ?

(ಎಲೈ, ಈ ಖಂಡದಿಂದ ಮೋದಕವನ್ನು ಮಾಡುತ್ತಾರೇನು ? )

ಮದನಿಕಾ—ನಹಿ, ಪಠ್ಯತೇ ಖಲ್ವೇತತ್. (ಇಲ್ಲ, ಇದನ್ನು ಹಾಡುತ್ತಾರೆ.)

೨೦ ಅಧಿಬಲಲಕ್ಷಣ—

**ಅನ್ಯೋನ್ಯವಾಕ್ಯಾಧಿಕೋಕ್ತಿಃ ಸ್ಪರ್ಧಯಾಧಿಬಲಂ ಭವೇತ್ ।**

ತಾ—ಪರಸ್ಪರವಾಗಿ ಮಾತನಾಡುವಾಗ ಸ್ಪರ್ಧೆಯಿಂದ ಬರುವ ಹೆಚ್ಚು ಹೆಚ್ಚಿನ ಮಾತು 'ಅಧಿಬಲ' ವಾಗುತ್ತದೆ.

ಉದಾ—(ವೇಣೀ ೫—೨೭—೩೪) ಭೀಮ :—

ಸಕಲರಿಪುಜಯಾಶಾ ಯತ್ರಬದ್ಧಾ ಸುತೈಸ್ತೇ
ತೃಣಮಿವ ಪರಿಭೂತೋ ಯಸ್ಯಗರ್ವೇಣಲೋಕಃ ।
ರಣಶಿರಸಿ ನಿಹಂತಾ ತಸ್ಯ ರಾಧಾಸುತಸ್ಯ
ಪ್ರಣಮತಿ ಪಿತರೌವಾಂ ಮಧ್ಯಮಃ ಪಾಂಡುಪುತ್ರಃ ॥

ನಿನ್ನ ಪುತ್ರರು ಸಕಲಶತ್ರುಗಳನ್ನು ಜಯಿಸುವ ಆಸೆಯನ್ನು ಯಾವನಲ್ಲಿ ಇಟ್ಟಿದ್ದರೋ, ಗರ್ವದಿಂದ ಲೋಕವನ್ನು ಹುಲ್ಲಿನಂತೆ ಕಡೆಗಣಿಸಿದ್ದ ಕರ್ಣನನ್ನು ಯುದ್ಧದಲ್ಲಿ ಕೊಂದುಹಾಕಿದ ಪಾಂಡವ ಮಧ್ಯಮನಾದ ನಾನು (ಅರ್ಜುನನು) ನಿಮಗೆ (ಧೃತರಾಷ್ಟ್ರಗಾಂಧಾರಿಯರಿಗೆ) ನಮಸ್ಕರಿಸುತ್ತೇನೆ. ಎಂಬಲ್ಲಿಂದ ಆರಂಭಿಸಿ, ರಾಜಾ—ಅರೇ, ನಾಹಂ ಭವಾನಿವ ವಿಕತ್ಥನಾಪ್ರಗಲ್ಭಃ, ಕಿಂತು,

ದ್ರಕ್ಷ್ಯಂತಿ ನ ಚಿರಾತ್ ಸುಪ್ತಂಬಾಂಧವಾಸ್ತ್ವಾಂ ರಣಾಂಗಣೇ ।
ಮದ್ಗದಾಭಿನ್ನವಕ್ಷೋಽಸ್ಥಿವೇಣಿಕಾಭಂಗಭೀಷಣಮ್ ॥

(ನಾನು ನಿನ್ನಂತೆ ಆತ್ಮಶ್ಲಾಘನೆಯಲ್ಲಿ ಪಂಡಿತನಲ್ಲ, ಆದರೆ ಅತ್ಯಲ್ಪ ಕಾಲದಲ್ಲಿಯೇ ರಣರಂಗದಲ್ಲಿ ನನ್ನ ಗದೆಯಿಂದ ಎಲುಬಿನ ಗೂಡು ಮುರಿದು ಚೂರಾದಾಗ, ಭಯಂಕರವಾಗಿ ಬಿದ್ದಿರುವ ನಿನ್ನನ್ನು ನಿನ್ನ ಬಾಂಧವರು ನೋಡುವರು.)

೨೧ ಗಂಡಲಕ್ಷಣ—

**ಗಂಡಃ ಪ್ರಸ್ತುತಸಂಬಂಧಿ ಭಿನ್ನಾರ್ಥಂ ಸಹಸೋದಿತಂ ॥ ೧೮ ॥**

ತಾ—ಪ್ರಸ್ತುತವಿಷಯಕ್ಕೆ ಸಂಬಂಧಿಸಿದ ಬೇರೆ ಯಾವುದೋ ವಿಷಯ ಒಮ್ಮೆಲೇ ಬರುವುದು 'ಗಂಡ'.

ಉದಾ:—(ಉತ್ತರ–೧–೩೮) ರಾಮ:—

ಇಯಂಗೇಹೇ ಲಕ್ಷ್ಮೀರಿಯಮಮೃತವರ್ತಿರ್ನಯನಯೋಃ,
ಅಸಾವಸ್ಯಾಃ ಸ್ಪರ್ಶೋ ವಪುಷಿ ಬಹಲಶ್ಚಂದನರಸಃ ।
ಅಯಂ ಬಾಹುಃ ಕಂಠೇ ಶಿಶಿರಮಸೃಣೋ ಮೌಕ್ತಿಕಸರಃ
ಕಿಮಸ್ಯಾನಪ್ರೇಯೋ ಯದಿ ಪರಮಸಹ್ಯಸ್ತು ವಿರಹಃ ॥

(ಇವಳು ಮನೆಯಲ್ಲಿ ಲಕ್ಷ್ಮಿ, ಇವಳು ಕಣ್ಣುಗಳಿಗೆ ಅಮೃತಹಚ್ಚುವ ಅಮೃತದ ಬತ್ತಿ ; ಇವಳ ಈ ಸ್ಪರ್ಶವು ಮೈಗೆ ಚಂದನದ ರಸಲೇಪ ; ಇವಳ ತೋಳು ಕಂಠದಲ್ಲಿರುವ ಕೋಮಲವೂ ಶೀತಲವೂ ಆದ ಮುತ್ತಿನ ಸರ ; ಈಕೆಯಲ್ಲಿರುವ ಯಾವುದು ತಾನೇ ಪ್ರಿಯವಾಗಿಲ್ಲ, ಕೇವಲ ಇವಳ ವಿರಹವೊಂದೇ ಅಸಹ್ಯವಾಗಿದೆ.)

ಪ್ರತೀಹಾರಿ—ದೇವ, ಉಪಸ್ಥಿತಃ (ದೇವ, ಬಂದೊದಗಿದ್ದಾನೆ.)

ರಾಮ :—ಅಯಿ, ಕಃ ? (ಎಲೋ ಯಾರು ?)

ಪ್ರತೀಃ—ದೇವಸ್ಯ ಆಸನ್ನಪರಿಚಾರಕಃ ದುರ್ಮುಖಃ, (ದೇವನ ಸಮೀಪ ಸೇವಕ ದುರ್ಮುಖ.)

ಇಲ್ಲಿ ಸೀತೆಯ ವಿರಹ ಅಸಹ್ಯ ಎಂದು ರಾಮನು ಹೇಳುತ್ತಿರುವಾಗ ಪ್ರತೀಹಾರಿಯು ದುರ್ಮುಖನ ಆಗಮನವನ್ನು ಹೇಳುತ್ತಾನೆ. ಇದು ಪ್ರಸ್ತುತ ವಿಷಯ. ಜೊತೆಗೆ ದುರ್ಮುಖನು ಸೀತೆಯ ಮೇಲಿನ ಅಪವಾದವನ್ನು ಹೇಳುವುದರಿಂದ ಸೀತೆಯ ವಿರಹವು ಉಪಸ್ಥಿತವಾಯಿತು ಎಂಬ ಇನ್ನೊಂದು ವಿಷಯವೂ ಒಮ್ಮೆಲೇ ಬಂದಂತಾಗಿದೆ.

### ೨೨ ಅವಸ್ಯಂದಿತಲಕ್ಷಣ—

**ರಸೋಕ್ತಸ್ಯಾನ್ಯಥಾವ್ಯಾಖ್ಯಾ ಯತ್ರಾವಸ್ಯಂದಿತಂಹಿತತ್.**

ತಾ—ರಸಪೂರ್ಣವಾದ (ಅಂದರೆ ಉತ್ಕೃಷ್ಟ ಭಾವದ) ಮಾತಿನಲ್ಲಿ ಸಹಜವಾದ ಅರ್ಥವನ್ನು ಬಿಟ್ಟು ಬೇರೆ ವ್ಯಾಖ್ಯಾನ ಮಾಡುವುದು 'ಅವಸ್ಯಂದಿತ.'

ಉದಾ—(ಛಲಿತರಾಮ, ಅಪ್ರಕಟಿತ.)

ಸೀತಾ:—ಜಾತ, ಕಲ್ಯೇ ಖಲು ಯುವಾಭ್ಯಾಂ ಅಯೋಧ್ಯಾಗಂತವ್ಯಾ, ತತ್ರ ಸ ರಾಜಾ ವಿನಯೇನ ನಂತವ್ಯಃ. (ಮಗೂ, ನಾಳೆ ನೀವಿಬ್ಬರು ಅಯೋಧ್ಯೆಗೆ ಹೋದಾಗ ಅಲ್ಲಿ ರಾಜನಿಗೆ ವಿನಯದಿಂದ ನಮಸ್ಕರಿಸಬೇಕು.)

ಲವ :—ಅಂಬ, ಕಿಮಾವಾಭ್ಯಾಂ ರಾಜೋಪಜೀವಿಭ್ಯಾಂ ಭವಿತವ್ಯಂ ? (ಅಮ್ಮ, ನಾವು ಹಾಗಾದರೆ ರಾಜನ ಸೇವಕರಾಗಿರಬೇಕೆ ?)

ಸೀತಾ :—ಜಾತ ! ಸ ಖಲು ಯುವಯೋಃ ಪಿತಾ. (ಮಗೂ ಅವನು ನಿಮ್ಮ ತಂದೆ)

ಲವ :—ಕಿಮಾವಯೋಃ ರಘುಪತಿಃ ಪಿತಾ ? (ಏನು, ರಘುಪತಿಯು ನಮ್ಮ ತಂದೆಯೇ ?)

ಸೀತಾ :—(ಸಾಶಂಕಂ) ಜಾತ ! ನ ಖಲು ಪರಂ ಯುವಯೋಃ ಸರ್ವಸ್ಯಾ ಏವ ಪೃಥಿವ್ಯಾಃ. (ಶಂಕಿಸುತ್ತಾ) ಮಗೂ ನಿಮಗೆ ಮಾತ್ರವಲ್ಲ, ಸಮಸ್ತ ಪೃಥಿವಿಗೂ ತಂದೆ)

**೨೩ ನಾಲಿಕಾಲಕ್ಷಣ—**

**ಸೋಪಹಾಸಾ ನಿಗೂಢಾರ್ಥಾ ನಾಲಿಕ್ಯೈವ ಪ್ರಹೇಲಿಕಾ**

**ತಾ**–ಹಾಸ್ಯ ಪೂರ್ಣವಾಗಿದ್ದು ರಹಸ್ಯವಾದ ಅರ್ಥವುಳ್ಳ ಪ್ರಹೇಲಿಕೆಯೇ (ಒಗಟು) ನಾಲಿಕಾ.

ಉದಾ—(ಮುದ್ರಾರಾಕ್ಷಸ) ಚರಃ–ಹಂಹೋ, ಬ್ರಾಹ್ಮಣ ಮಾಕುಪ್ಯ, ಕಿಮಪಿ ತವ ಉಪಾಧ್ಯಾಯಃ ಜಾನಾತಿ. ಕಿಮಪಿ ಅಸ್ಮಾದೃಶ ಜನಃ ಜಾನಾತಿ.

(ಹೋಬ್ರಾಹ್ಮಣ ಕೋಪಿಸಬೇಡ. ನಿನ್ನ ಉಪಾಧ್ಯಾಯನು ಸ್ವಲ್ಪ ತಿಳಿದಿರಬಹುದು, ನಮ್ಮಂತಹವರೂ ಸ್ವಲ್ಪ ತಿಳಿದಿರುತ್ತಾರೆ.)

ಶಿಷ್ಯ :—ಕಿಮಸ್ಮದುಪಾಧ್ಯಾಯಸ್ಯ ಸರ್ವಜ್ಞತ್ವಮಪಹರ್ತುಮಿಚ್ಛಸಿ ? ನಮ್ಮ ಉಪಾಧ್ಯಾಯರ ಸರ್ವಜ್ಞತ್ವವನ್ನು ಅಪಹರಿಸಲು ಬಯಸುತ್ತೀಯ ?)

ಚರ :—ಯದಿ ತೇ ಉಪಾಧ್ಯಾಯಃ ಸರ್ವಂ ಜಾನಾತಿ, ತದ್ ಭಣತು ತಾವತ್ ಕಸ್ಯ ಚಂದ್ರೋऽನಭಿಪ್ರೇತ ಇತಿ. (ನಿನ್ನ ಉಪಾಧ್ಯಾಯನಿಗೆ ಎಲ್ಲವೂ ತಿಳಿದಿರುವುದಾದರೆ ಹೇಳಲಿ ? ಯಾರಿಗೆ ಚಂದ್ರನು ಚಂದ್ರಗುಪ್ತನು ಎಂದು ಮತ್ತೊಂದು ಅರ್ಥ) ಇಷ್ಟನಲ್ಲ ?

ಶಿಷ್ಯ :—ಕಿಮನೇನ ಜ್ಞಾತೇನ ಭವತಿ ? (ಅದರ ತಿಳುವಳಿಕೆಯಿಂದ ಏನು ಪ್ರಯೋಜನ?) ಹೀಗೆ ಆರಂಭವಾಗಿ, ಚಾಣಕ್ಯ :—ಚಂದ್ರಗುಪ್ತಾದ-ಪರಕ್ತಾನ್ ಪುರುಷಾನ್ ಜಾನಾಮಿ. (ಕೆಲವರು ಚಂದ್ರಗುಪ್ತನಲ್ಲಿ ಅಪ್ರಸನ್ನರಾಗಿದ್ದಾರೆಂದು ತಿಳಿದು ಬರುತ್ತದೆ) ಎಂಬಲ್ಲಿವರೆಗೆ.

**೨೪. ಅಸತ್ ಪ್ರಲಾಪಲಕ್ಷಣ—**

**ಅಸಂಬದ್ಧಕಥಾಪ್ರಾಯೋऽಸತ್ ಪ್ರಲಾಪೋ ಯಥೋತ್ತರಃ ।**

ತಾ:—ನಾಲಿಕಾದ ಅನಂತರದ ಅಸತ್ ಪ್ರಲಾಪವು ಅಸಂಬದ್ಧವಾದ ಮಾತುಗಳಿಂದ ಕೂಡಿದೆ. ಅರ್ಧ ಜಾಗೃತಿ, ಉನ್ಮಾದ, ಮಕ್ಕಳ ಮಾತುಗಳಲ್ಲಿ ಬರುವ ಅಸಂಬದ್ಧತೆಯು ಇಲ್ಲಿ ವಿವಕ್ಷಿತವಾಗಿರುವುದರಿಂದ ಅದು ಅಸಂಗತಿ ಎಂಬ ವಾಕ್ಯದೋಷವಲ್ಲ.

ಉದಾ—(ಶಾರ್ಙ್ಗಧರ.)

ಅರ್ಚಿಷ್ಮಂತಿ ವಿದಾರ್ಯ ವಕ್ತ್ರಕುಹರಾಣ್ಯಾಸೃಕ್ಕತೋ ವಾಸುಕೇಃ,
ಅಂಗುಲ್ಯಾ ವಿಷಕರ್ಬುರಾನ್ ಗಣಯತಃ ಸಂಸ್ಪೃಶ್ಯ ದಂತಾಂಕುರಾನ್ ।
ಏಕಂ ತ್ರೀಣಿ ನವಾಷ್ಟ ಸಪ್ತ ಷಡಿತಿ ಪ್ರಧ್ವಸ್ತ ಸಂಖ್ಯಾಕ್ರಮಾಃ
ವಾಚಃ ಕ್ರೌಂಚರಿಪೋಃ ಶಿಶುತ್ವ ವಿಕಲಾಃ ಶ್ರೇಯಾಂಸಿ ಪುಷ್ಣಂತು ವಃ ॥

(ಶಂಭುವಿನ ಕಂಠದಲ್ಲಿ ಹೆಡೆಯಾಡುತ್ತಿರುವ ವಾಸುಕಿಯ ಜಾಜ್ವಲ್ಯಮಾನವಾದ ಬಾಯಿಯನ್ನು ಕಟವಾಯಿಯವರೆಗೆ ಬಿಡಿಸಿ, ಒಂದು, ಮೂರು, ಒಂಬತ್ತು, ಎಂಟು, ಏಳು, ಆರು ಎಂದು ತಪ್ಪು ತಪ್ಪಾಗಿ ವಾಸುಕಿಯ ವಿಷದ ಹಲ್ಲುಗಳನ್ನು ಬೆರಳಿಟ್ಟು ಎಣಿಸುತ್ತಿರುವ ಬಾಲ ಸುಬ್ರಹ್ಮಣ್ಯನ ಮುದ್ದು ಮಾತುಗಳು ನಿಮ್ಮ ಶ್ರೇಯಸ್ಸನ್ನು ಹೆಚ್ಚಿಸಲಿ.)

(ವಿಕ್ರಮೋ–೪–೩೩.)
ಹಂಸ ಪ್ರಯಚ್ಛ ಮೇ ಕಾಂತಾಂ ಗತಿಸ್ತಸ್ಯಾಸ್ತ್ವಯಾಹೃತಾ |
ವಿಭಾವಿತ್ಯೈಕದೇಶೇನ ದೇಯಂ ಯದಭಿಯುಜ್ಯತೇ ||

(ಎಲೈ ಹಂಸವೇ, ನೀನು ಯಾವಳ ನಡೆಯನ್ನು ಅಪಹರಿಸಿರುವೆಯೋ ಅಂತಹ ನನ್ನ ಕಾಂತೆಯನ್ನು ಹಿಂದಕ್ಕೆ ಕೊಡು. ಎಲ್ಲಿ ಒಂದು ಭಾಗ ದೊರೆಯುತ್ತದೆಯೋ ಅಲ್ಲಿಯೇ ಪೂರ್ಣವಾದ ವಸ್ತುವೂ ದೊರೆಯಬೇಕು.)

ಭುಕ್ತಾ ಹಿ ಮಯಾ ಗಿರಯಃ ಸ್ನಾತೋಽಹಂ ವಹ್ನಿನಾ ಪಿಬಾಮಿ ವಿಯತ್ |
ಹರಿಹರಹಿರಣ್ಯಗರ್ಭಾ ಮತ್ಪುತ್ರಾಸ್ತೇನ ನೃತ್ಯಾಮಿ ||

(ನಾನು ಪರ್ವತಗಳನ್ನು ತಿಂದಿದ್ದೇನೆ, ಬೆಂಕಿಯಲ್ಲಿ ಸ್ನಾನ ಮಾಡಿದ್ದೇನೆ. ಆಕಾಶವನ್ನು ಕುಡಿಯುತ್ತೇನೆ. ಹರಿಹರಬ್ರಹ್ಮರು ನನ್ನ ಮಕ್ಕಳು. ಅದಕ್ಕಾಗಿ ನಾನು ನರ್ತಿಸುತ್ತೇನೆ.)

೨೫ **ವ್ಯಾಹಾರಲಕ್ಷಣ—**

**ಅನ್ಯಾರ್ಥಮೇವ ವ್ಯಾಹಾರೋ ಹಾಸ್ಯಲೋಭಕರಂ ವಚಃ**

ತಾ—ಹಾಸ್ಯ, ಆಸೆಗಳನ್ನು ಹುಟ್ಟಿಸುವ, ಅನ್ಯಾರ್ಥವುಳ್ಳ ಮಾತೇ 'ವ್ಯಾಹಾರ.'

ಉದಾ—(ಮಾಲವಿಕಾಗ್ನಿಮಿತ್ರ ಅಂ–೧) ಮಾಲವಿಕೆ ಲಾಸ್ಯಪ್ರಯೋಗ ಮುಗಿದಾಗ ಹೊರಡಲು ಅನುವಾಗುತ್ತಾಳೆ.

ವಿದೂ—ಮಾ ತಾವತ್, ಉಪದೇಶಶುದ್ಧಾ ಗಮಿಷ್ಯಸಿ. (ನಿಲ್ಲು, ನೀನು ನನ್ನ ಉಪದೇಶ ಕೇಳಿ ಶುದ್ಧಳಾಗಿ ಹೋಗತಕ್ಕದ್ದು.) ಇತ್ಯಾದಿಯಿಂದ ಗಣದಾಸಃ (ವಿದೂಷಕಂ ಪ್ರತಿ) ಆರ್ಯ, ಉಚ್ಯತಾಂ, ಯಸ್ತ್ವಯಾ ಕ್ರಮ ಭೇದೋಲಕ್ಷಿತಃ. (ಆರ್ಯ, ಏನಾದರೂ ಕ್ರಮ ವ್ಯತ್ಯಾಸವಿದ್ದರೆ ಹೇಳು.)

ವಿದೂ—ಪ್ರಥಮಂ ಬ್ರಾಹ್ಮಣಸ್ಯ ಪೂಜಾ ಭವತಿ. ಸಾಏತಯಾ ಲಂಘಿತಾ.

(ಮಾಲವಿಕಾ ಸ್ಮಯತೇ) (ಮೊದಲು ಬ್ರಾಹ್ಮಣನ ಪೂಜೆಯಾಗಬೇಕು, ಅದನ್ನು ಇವಳು ಬಿಟ್ಟಿದ್ದಾಳೆ. (ಮಾಲವಿಕೆ ನಗುತ್ತಾಳೆ) ಇಲ್ಲಿವರೆಗೆ ನಾಯಕನು ತನ್ನ ಪ್ರಿಯೆಯನ್ನು ಮತ್ತಷ್ಟು ನೋಡಲೆಂದು ವಿದೂಷಕನು ಹಾಸ್ಯಕಾರಿಯಾದ ಮಾತನ್ನು ಪ್ರಯೋಗಿಸಿದ್ದಾನೆ. ಇದು 'ವ್ಯಾಹಾರ'.

## ೨೬ ಮೃದವಲಕ್ಷಣ

**ದೋಷಾಗುಣಾ ಗುಣಾ ದೋಷಾ ಯತ್ರಸ್ಯುರ್ಮೃದವಂ ಹಿತತ್ ।**

ಕಾ—ಎಲ್ಲಿ ದೋಷವು ಗುಣವಾಗಿಯೂ, ಗುಣವು ದೋಷವಾಗಿಯೂ ಕಲ್ಪಿತವಾಗುತ್ತದೆಯೋ ಅದು 'ಮೃದವ'. ಉದಾ—(ಶಾಕುಂ. ೨-೫)

ಮೇದಶ್ಛೇದ ಕೃಶೋದರಂ ಲಘುಭವತ್ಯುತ್ಥಾನ ಯೋಗ್ಯಂವಪುಃ
ಸತ್ವಾನಾಮಪಿ ಲಕ್ಷ್ಯತೇ ವಿಕೃತಿಮಚ್ಚಿತ್ತಂ ಭಯಕ್ರೋಧಯೋಃ ।
ಉತ್ಕರ್ಷಃ ಸ ಚ ಧನ್ವಿನಾಂ ಯದಿಷವಃ ಸಿಧ್ಯಂತಿ ಲಕ್ಷ್ಯೇ ಚಲೇ ।
ಮಿಥ್ಯೈವ ವ್ಯಸನಂ ವದಂತಿ ಮೃಗಯಾಮೀದೃಗ್ವಿನೋದಃ ಕುತಃ ॥

(ಬೇಟೆಯಿಂದ ಕೊಬ್ಬು ಕರಗಿ, ಹೊಟ್ಟೆ ಕಿರಿದಾಗಿ ಶರೀರವು ಲಘುವಾಗುತ್ತದೆ. ಭಯ, ಕ್ರೋಧಗಳಲ್ಲಿ ಮೃಗಗಳಲ್ಲಿ ಉಂಟಾಗುವ ವಿಕಾರಗಳನ್ನು ಕಂಡುಹಿಡಿಯಬಹುದಾಗುತ್ತದೆ. ಚಂಚಲವಾದ ಗುರಿಯನ್ನು ಹೊಡೆಯುವ ಕೈಚಳಕವೂ ಸಿದ್ಧಿಸುತ್ತದೆ. ಇಂತಹ ಬೇಟೆಯನ್ನು ವ್ಯಸನವೆಂದು ಹೇಳುವುದು ಸರಿಯಲ್ಲ. ಇಂತಹ ವಿನೋದ ಇನ್ನೆಲ್ಲಿ ?) ಇಲ್ಲಿ ಬೇಟೆಯ ದೋಷವು ಗುಣವಾಗಿದೆ.

ಸತತಮನಿರ್ವೃತಮಾನಸಮಾಯಾಸಸಹಸ್ರಸಂಕುಲಕ್ಲಿಷ್ಟಂ ।
ಗತನಿದ್ರಮವಿಶ್ವಾಸಂ ಜೀವತಿ ರಾಜಾ ಜಿಗೀಷುರಯಂ ॥

(ಸದಾ ಅಶಾಂತವಾದ ಮನಸ್ಸು. ಸಹಸ್ರ ವ್ಯಥೆಗಳು ಕಷ್ಟಕೊಡುತ್ತಿವೆ. ನಿದ್ರೆಯಿಲ್ಲದೆ ಯಾರೊಬ್ಬರಲ್ಲಿಯೂ ವಿಶ್ವಾಸವಿಲ್ಲದೆ ಈ ಜಯಾಪೇಕ್ಷಿಯಾದ

ರಾಜನು ಜೀವಿಸುತ್ತಿದ್ದಾನೆ). (ಆಕರ ಅನುಪಲಬ್ಧ,) ಇಲ್ಲಿ ರಾಜಪದವಿಯ ಗುಣಗಳನ್ನು ದೋಷವನ್ನಾಗಿ ಪರಿಗಣಿಸಿದೆ.

ಗುಣದೋಷಗಳು ಪರಸ್ಪರ ವಿರುದ್ಧವಾಗಿ ಚಿತ್ರಿತವಾಗಿರುವ ಉದಾಹರಣೆ (ಆಕರ ಅನುಪಲಬ್ಧ).

ಸಂತಃ ಸಚ್ಚರಿತೋದಯವ್ಯಸನಿನಃ ಪ್ರಾದುರ್ಭವದ್ಯಂತ್ರಣಾಃ
ಸರ್ವತ್ರೈವ ಜನಾಪವಾದಚಕಿತಾಃ ಜೀವಂತಿ ದುಃಖಂ ಸದಾ ।
ಅವ್ಯುತ್ಪನ್ನಮತಿಃ ಕೃತೇನ ನ ಸತಾ ನೈವಾಸತಾ ವ್ಯಾಕುಲೋ
ಯುಕ್ತಾಯುಕ್ತವಿವೇಕಶೂನ್ಯಹೃದಯೋ ಧನ್ಯೋ ಜನಃ ಪ್ರಾಕೃತಃ ॥

(ಸತ್ಪುರುಷರು ಒಳ್ಳೆಯ ನಡತೆಯನ್ನು ಹೆಚ್ಚಿಸಿಕೊಳ್ಳುವ ಚಿಂತೆಯಲ್ಲಿರುತ್ತಾರೆ. ನಿಯಮಬದ್ಧರಾಗಿದ್ದು ಯಾವಾಗಲೂ ಜನಾಪವಾದಕ್ಕೆ ಬೆದರುತ್ತಾ ದುಃಖದಿಂದಲೇ ಬದುಕುತ್ತಿರುತ್ತಾರೆ. ಮೂರ್ಖನಾದರೋ ಒಳಿತು ಕೆಡುಕುಗಳಾವುದರಿಂದಲೂ ಖೇದ ಹೊಂದದೆ ಯುಕ್ತಾಯುಕ್ತವಿವೇಕಶೂನ್ಯನಾಗಿರುತ್ತಾನೆ. ಅವನೇ ಧನ್ಯನು.)

**೨೭ ಪ್ರಸ್ತಾವನೆಯ ಉಪಸಂಹಾರ—**

**ಏಷಾಮನ್ಯತಮೇನಾರ್ಥಂ ಪಾತ್ರಂ ಚಾಕ್ಷಿಪ್ಯಸೂತ್ರಭೃತ್**
**॥ ೨೦ ॥**

**ಪ್ರಸ್ತಾವನಾಂತೇ ನಿರ್ಗಚ್ಛೇತ್ ತತೋ ವಸ್ತು ಪ್ರಪಂಚಯೇತ್ ।**

ತಾ — ಮೇಲೆ ಹೇಳಿದಂತೆ ಭಾರತೀವೃತ್ತಿಯನ್ನಾಶ್ರಯಿಸಿದ, ಪ್ರರೋಚನಾ, ವೀಥೀ, ಪ್ರಹಸನ, ಆಮುಖ ಇವುಗಳಲ್ಲಿ ಯಾವುದಾದರೊಂದರಿಂದ ನಾಟಕದ ವಿಷಯ, ಪಾತ್ರಗಳನ್ನು ಸೂಚಿಸಿ ಪ್ರಸ್ತಾವನೆಯ ಕೊನೆಯಲ್ಲಿ ಸೂತ್ರಧಾರನು ರಂಗದಿಂದ ನಿರ್ಗಮಿಸಬೇಕು. ಅನಂತರ ನಾಟಕದ ವಸ್ತುವನ್ನು ವಿಸ್ತಾರವಾಗಿ ಚಿತ್ರಿಸಬೇಕು.

**೨೮ ಆಧಿಕಾರಿಕವೃತ್ತ—**

**ಅಭಿಗಮ್ಯಗುಣೈರ್ಯುಕ್ತೋ ಧೀರೋದಾತ್ತಃ ಪ್ರತಾಪವಾನ್**
**|| ೨೨ ||**

**ಕೀರ್ತಿಕಾಮೋ ಮಹೋತ್ಸಾಹಸ್ತ್ರಯ್ಯಾಸ್ತ್ರಾತಾ ಮಹೀಪತಿಃ |**
**ಪ್ರಖ್ಯಾತವಂಶೋ ರಾಜರ್ಷಿರ್ದಿವ್ಯೋ ವಾ ಯತ್ರ ನಾಯಕಃ**
**|| ೨೩ ||**

**ತತ್ ಪ್ರಖ್ಯಾತಂ ವಿಧಾತವ್ಯಂ ವೃತ್ತಮತ್ರಾಧಿಕಾರಿಕಂ |**

**ತಾ**–ಆಕರ್ಷಕವಾದ ಗುಣಗಳಿಂದ ಕೂಡಿದವನೂ, 'ಧೀರೋದಾತ್ತ'ನೂ, ಪ್ರತಾಪಶಾಲಿಯೂ, ಕೀರ್ತಿಕಾಮಿಯೂ, ವಿಶೇಷ ಉತ್ಸಾಹವುಳ್ಳವನೂ, ವೇದರಕ್ಷಕನೂ, ರಾಜನೂ, ಪ್ರಖ್ಯಾತವಂಶದಲ್ಲಿ ಜನಿಸಿದವನೂ ಆದ (ಸತ್ಯವಾದಿ, ನೀತಿಶಾಸ್ತ್ರಜ್ಞ, ಸದ್ಗುಣಿ, ಅನುಚಿತ ಕಾರ್ಯಗಳಲ್ಲಿ ತೊಡಗದಿರುವವನು.) ರಾಮಾಯಣ ಮಹಾಭಾರತ ಮುಂತಾದುವುಗಳಲ್ಲಿ ಪ್ರಸಿದ್ಧನಾದ ರಾಜರ್ಷಿಯಾಗಲಿ ಅಥವಾ ದೇವನಾಗಲಿ ನಾಟಕದಲ್ಲಿ ನಾಯಕನಾಗಿರತಕ್ಕದ್ದು, ಅಲ್ಲಿ 'ಪ್ರಖ್ಯಾತ'ವಾದ ವೃತ್ತವನ್ನೇ 'ಆಧಿಕಾರಿಕ'ವಾಗಿ (ಮುಖ್ಯ ಕಥೆ) ಬಳಸಿಕೊಳ್ಳತಕ್ಕದ್ದು.

### ೨೬ ಮೂಲ ಇತಿವೃತ್ತದಲ್ಲಿ ವ್ಯತ್ಯಾಸ—

**ಯತ್ತತ್ರಾನುಚಿತಂ ಕಿಂಚಿತ್, ನಾಯಕಸ್ಯ ರಸಸ್ಯ ವಾ || ೨೪ ||**
**ವಿರುದ್ಧಂ ತತ್ ಪರಿತ್ಯಾಜ್ಯಮನ್ಯಥಾ ವಾ ಪ್ರಕಲ್ಪಯೇತ್ |**

**ತಾ**—ಕವಿಯು ಆಯ್ದುಕೊಂಡ ಕಥೆಯಲ್ಲಿ ನಾಯಕ ಮತ್ತು ರಸಕ್ಕೆ ಅನುಚಿತವಾದುದನ್ನೂ ವಿರುದ್ಧವಾದುದನ್ನೂ ಬಿಟ್ಟುಬಿಡಬೇಕು ಅಥವಾ ಬದಲಾಯಿಸಬೇಕು.

ಉದಾ—ಉದಾತ್ತ ರಾಘವದಲ್ಲಿ ಮಾಯುರಾಜನು ವಾಲಿಯ ಕಪಟವಧೆಯನ್ನು ಬಿಟ್ಟಿದ್ದಾನೆ. 'ಮಹಾವೀರ ಚರಿತೆ'ಯಲ್ಲಿ ವಾಲಿಯು ರಾವಣನ ಸ್ನೇಹಿತನಾಗಿದ್ದು ಶ್ರೀ ರಾಮನನ್ನು ಕೊಲ್ಲ ಬಂದಾಗ ವಧಿಸಲ್ಪಟ್ಟನೆಂದು ಭವಭೂತಿಯು ಬದಲಾಯಿಸಿದ್ದಾನೆ.

೩೦ ಆಧಿಕಾರಿಕ ಯೋಜನೆ—

ಆದ್ಯಂತಮೇವಂ ನಿಶ್ಚಿತ್ಯ ಪಂಚಧಾ ತದ್ವಿಭಜ್ಯ ಚ ॥ ೨೫ ॥
ಖಂಡಶಃ ಸಂಧಿಸಂಜ್ಞಾಂಶ್ಚ, ವಿಭಾಗಾನಪಿ ಖಂಡಯೇತ್ ।

ತಾ—ನಾಟಕಕಾರನು ಪ್ರಧಾನಕಥೆಯನ್ನು ಅನೌಚಿತ್ಯ, ರಸ ವಿರೋಧಗಳಿಲ್ಲದಂತೆ ಶುದ್ಧ ಮಾಡಿಕೊಂಡು, ಸೂಚ್ಯ ಮತ್ತು ದೃಶ್ಯ ಭಾಗಗಳನ್ನು ನಿರ್ಧರಿಸಿ ಐದು ಅರ್ಥ ಪ್ರಕೃತಿಗಳು, ಮತ್ತು ಐದು ಅವಸ್ಥೆಗಳಿಗೆ ಅನುಸಾರ-ವಾಗಿ ಪ್ರಧಾನವೃತ್ತವನ್ನು ಐದು ಸಂಧಿಗಳಾಗಿ ಭಾಗಮಾಡಿ ಆಮೇಲೆ ಒಂದೊಂದು ಭಾಗಕ್ಕೂ ಒಳವಿಭಾಗ ಅಂದರೆ ಸಂಧ್ಯಂಗಗಳನ್ನು ಕಲ್ಪಿಸಿ ವಿಭಜಿಸಬೇಕು.

೩೧ ಪ್ರಾಸಂಗಿಕವೃತ್ತದ ಯೋಜನೆ—

ಚತುಃಷಷ್ಟಿಸ್ತು ತಾನಿಸ್ಯುರಂಗಾನೀತ್ಯಪರಂ ತಥಾ ॥ ೨೬ ॥
ಪತಾಕಾವೃತ್ತಮುಪ್ಯೂನಮೇಕಾದ್ಯೈರನುಸಂಧಿಭಿಃ ।
ಅಂಗಾನ್ಯತ್ರಯಥಾಲಾಭಮಸಂಧಿಂ ಪ್ರಕರೀಂ ನ್ಯಸೇತ್ ॥ ೨೭ ॥

ತಾ—ಆಧಿಕಾರಿಕವೃತ್ತವನ್ನು ಸಂಧಿಸಂಧ್ಯಂಗಗಳಾಗಿ ವಿಭಜಿಸಿದಾಗ 64 ಅಂಗಗಳಾಗುತ್ತವೆ. ಪತಾಕಾ ಮತ್ತು ಪ್ರಕರೀ ಎಂಬ ಪ್ರಾಸಂಗಿಕೇತಿ-ವೃತ್ತದಲ್ಲಿ ಪತಾಕೆಯನ್ನು ಅನುಸಂಧಿಯಾಗಿ ವಿಭಜಿಸಬೇಕು. ಈ ಅನುಸಂಧಿಗಳು ಆಧಿಕಾರಿಕ ಸಂಧಿಗಳಿಗಿಂತ ಸಂಖ್ಯೆಯಲ್ಲಿ ಒಂದಾದರೂ ಕಡಿಮೆಯಾಗಿರಬೇಕು. 4,3,2,1, ಹೀಗಿರಬಹುದು. ಈ ಅನುಸಂಧಿಗಳಲ್ಲಿ ಸಂಧ್ಯಂಗಗಳ ಸಂಖ್ಯೆಯು ನಿಶ್ಚಿತವಾಗಿರಬೇಕಾಗಿಲ್ಲ. ಪ್ರಕರಿಯಲ್ಲಿ ಸಂಧಿಯನ್ನು ಯೋಜಿಸಬೇಕಾಗಿಲ್ಲ.

೩೨ ಆದಿಯುವಿಷ್ಕಂಭ ಅಥವಾ ಅಂಕ—

ಆದೌ ವಿಷ್ಕಂಭಕಂ ಕುರ್ಯಾದಂಕಂ ವಾ ಕಾರ್ಯಯುಕ್ತಿತಃ ।

ತಾ—ನಾಟಕದ ಮೊದಲಲ್ಲಿ ಕಾರ್ಯಯುಕ್ತಿ ಅಂದರೆ ವಿಷಯ ಪ್ರಾಮುಖ್ಯದ ಮೇಲೆ ಅಂಕವನ್ನೋ ವಿಷ್ಕಂಭವನ್ನೋ ಮೊದಲು ಯೋಜಿಸ-ತಕ್ಕದು.

**೩೩ ಆದಿವಿಷ್ಕಂಭ—**

**ಅಪೇಕ್ಷಿತಂ ಪರಿತ್ಯಜ್ಯನೀರಸಂ ವಸ್ತು ವಿಸ್ತರಂ || ೨೮ ||**
**ಯದಾಸಂದರ್ಶಯೇಚ್ಛೇಷಂ ಕುರ್ಯಾದ್ವಿಷ್ಕಂಭಕಂತದಾ ।**

ತಾ—ನಾಟಕದ ಆರಂಭದ ಕಥೆಯಲ್ಲಿ ವಸ್ತುವಿಸ್ತಾರವಿದ್ದು ಅದು ನೀರಸವಾಗಿದ್ದರೆ ಅದರಲ್ಲಿ ಬಿಡಬೇಕಾದುದನ್ನು ತ್ಯಜಿಸಿ ಉಳಿದುದನ್ನು ವಿಷ್ಕಂಭಕ ದಲ್ಲಿ ಯೋಜಿಸಿ ತೋರಿಸತಕ್ಕದ್ದು.

**೩೪ ಆದಿಯಲ್ಲಿ ಅಂಕಯೋಜನೆ—**

**ಯದಾತು ಸರಸಂ ವಸ್ತು ಮೂಲಾದೇವ ಪ್ರವರ್ತತೇ || ೨೯ ||**
**ಆದಾವೇವ ತದಾಂಕಃಸ್ಯಾತ್ ಆಮುಖಾಕ್ಷೇಪಸಂಶ್ರಯಃ ।**

ತಾ—ವಸ್ತುವು ಆರಂಭದಲ್ಲಿಯೇ ರಸಪೂರ್ಣವಾಗಿದ್ದರೆ ಆಗ ನಾಟಕಾ-ರಂಭದಲ್ಲಿಯೇ ಅಂಕವನ್ನು ಯೋಜಿಸಬೇಕು, ಆ ಅಂಕವು 'ಆಮುಖದ'ದಿಂದ ಕೂಡಿರ ತಕ್ಕದ್ದು.

**೩೫ ಅಂಕಲಕ್ಷಣ—**

**ಪ್ರತ್ಯಕ್ಷನೇತೃಚರಿತೋ ಬಿಂದುವ್ಯಕ್ತಿಪುರಸ್ಕೃತಃ || ೩೦ ||**
**ಅಂಕೋ ನಾನಾಪ್ರಕಾರಾರ್ಥಸಂವಿಧಾನರಸಾಶ್ರಯಃ ।**

ತಾ—ಅಂಕವು ನಾಯಕನ ಚರಿತ್ರೆಯನ್ನು ಪ್ರತ್ಯಕ್ಷವಾಗಿ ಒಳಗೊಂಡಿರ ಬೇಕು. ಬಿಂದುವು ಅಂಕದ ಪರಿಮಿತಿಯೊಳಗೆ ಹರಡಿರಬೇಕು. ಅನೇಕ ಪ್ರಯೋಜನ, ಸಂವಿಧಾನ ಮತ್ತು ರಸಗಳಿಗೆ ಆಶ್ರಯವಾಗಿರಬೇಕು. ಹೀಗೆ ಅನೇಕ ವಿಷಯಗಳಿಗೆ ಆಶ್ರಯವಾಗಿರುವುದರಿಂದ ಉತ್ಸಂಗ (ತೊಡೆ, ಆಶ್ರಯ)

ಎಂಬುದರ ಸಾಮ್ಯದಿಂದ ಅಂಕ ಎಂಬ ಹೆಸರು ಬಂದಿದೆ. 'ಉತ್ಸಂಗ ಚಿಹ್ನಯೋ ರಂಕಃ' ಅಮರ.

೩೬ ರಸಪರಿಪೋಷಣ—

ಅನುಭಾವ ವಿಭಾವಾಭ್ಯಾಂ ಸ್ಥಾಯಿನಾ ವ್ಯಭಿಚಾರಿಭಿಃ ॥ ೩೧ ॥
ಗೃಹೀತಮುಕ್ತೈಃ ಕರ್ತವ್ಯಮಂಗಿನಃ ಪರಿಪೋಷಣಂ ।

ತಾ—ಅನುಭಾವ ವಿಭಾವಗಳಿಂದಲೂ, ಸ್ಥಾಯಿಭಾವ ವ್ಯಭಿಚಾರಿ ಭಾವಗಳಿಂದಲೂ, ಹಿಡಿದುಬಿಟ್ಟು ಅಂದರೆ ಯಾವುದು ಯಾವ ಸಂದರ್ಭದಲ್ಲಿ ಆವಶ್ಯಕವೋ ಅದನ್ನು ಹಿಡಿದು ಅಗತ್ಯ ಮುಗಿದೊಡನೆ ಅದನ್ನು ಬಿಟ್ಟು ಪ್ರಧಾನ ರಸ ಪರಿಪೋಷಣೆಯನ್ನು ಮಾಡತಕ್ಕದ್ದು. (ಅನುಭಾವಾದಿಗಳ ವಿವರಣೆಗೆ ಪರಿಶಿಷ್ಟವನ್ನು ನೋಡಿರಿ.)

೩೭ ವಸ್ತುರಸಗಳ ಹೊಂದಾಣಿಕೆ—

ನಚಾತಿರಸತೋವಸ್ತು ದೂರಂ ವಿಚ್ಛಿನ್ನತಾಂನಯೇತ್ ॥ ೩೨ ॥
ರಸಂ ವಾ ನ ತಿರೋದಧ್ಯಾದ್ವಸ್ತ್ವಲಂಕಾರ ಲಕ್ಷಣೈಃ ।

ತಾ—ರಸಪೋಷಣೆಯ ಅತ್ಯಾಸಕ್ತಿಯಿಂದ ಕಥಾವಸ್ತುವು ಕಡಿದು ದೂರ ಹೋಗುವಷ್ಟು ಕಥೆಯನ್ನು ಎಳೆಯಬಾರದು ಮತ್ತು ನಾಟಕದ ವಸ್ತು, ಅಲಂಕಾರ ಲಕ್ಷಣಗಳಿಂದ ರಸವನ್ನು ಮುಚ್ಚಿ ಬಿಡಬಾರದು.

೩೮ ಪ್ರಧಾನರಸ ನಿರ್ದೇಶ—

ಏಕೋರಸೋಽಂಗೀಕರ್ತವ್ಯೋ ವೀರಃ ಶೃಂಗಾರ ಏವವಾ
॥ ೩೩ ॥
ಅಂಗಮನ್ಯೇ ರಸಾಃ ಸರ್ವೇಕುರ್ಯಾನ್ನಿರ್ವಹಣೇಽದ್ಭುತಂ ।

ತಾ—ನಾಟಕದಲ್ಲಿ ವೀರ ಅಥವಾ ಶೃಂಗಾರರಸಗಳು ಪ್ರಧಾನವಾಗಿರ ತಕ್ಕದ್ದು, ಉಳಿದ ಎಲ್ಲಾ ರಸಗಳು ಅಂಗವಾಗಿರಬೇಕು. ನಿರ್ವಹಣ ಸಂಧಿಯಲ್ಲಿ ಅದ್ಭುತರಸವನ್ನು ಯೋಜಿಸತಕ್ಕದ್ದು.

೩೯ ಅಂಕದಲ್ಲಿ ಅನಿರ್ದೇಶ್ಯಗಳು—

**ದೂರಾಧ್ವಾನಂ ವಧಂ ಯುದ್ಧಂ ರಾಜ್ಯದೇಶಾದಿವಿಪ್ಲವಮ್**
**|| ೩೪ ||**

**ಸಂರೋಧಂ ಭೋಜನಂ ಸ್ನಾನಂ ಸುರತಂ ಚಾನುಲೇಪನಂ |**
**ಅಂಬರಗ್ರಹಣಾದೀನಿ ಪ್ರತ್ಯಕ್ಷಾಣಿ ನ ನಿರ್ದಿಶೇತ್ || ೩೫ ||**

**ತಾ**—ದೂರದ ದಾರಿ ನಡೆಯುವುದು, ವಧ, ಯುದ್ಧ, ರಾಜ್ಯದೇಶ ಮುಂತಾದುವುಗಳಲ್ಲಿ ವಿಪ್ಲವ (ದಂಗೆ) ಮುತ್ತಿಗೆ, ಭೋಜನ, ಸ್ನಾನ, ಸುರತ, ಅನುಲೇಪನ (ಸುಗಂಧದ್ರವ್ಯಹಚ್ಚಿಕೊಳ್ಳುವುದು) ವಸ್ತ್ರಧಾರಣೆ ಮುಂತಾದುವುಗಳನ್ನು ಅಂಕದಲ್ಲಿ ಪ್ರತ್ಯಕ್ಷವಾಗಿ ತೋರಿಸಬಾರದು.

೪೦ **ಸರ್ವಥಾ ಅನಿರ್ದೇಶ್ಯ ಮತ್ತು ಅವಶ್ಯನಿರ್ದೇಶ್ಯ—**

**ನಾಧಿಕಾರಿವಧಂಕ್ವಾಪಿ ತ್ಯಾಜ್ಯಮಾವಶ್ಯಕಂ ನಚ**

**ತಾ**—ನಾಟಕದ ನಾಯಕನ ವಧೆಯನ್ನು ಎಲ್ಲಿಯೂ ಕೂಡ ತರಬಾರದು ಮತ್ತು ಸೂಚಿಸಲೂ ಬಾರದು. ಮತ್ತು ಆವಶ್ಯಕವಾದ ಯಾವ ವಿವರವನ್ನೂ ಬಿಡಬಾರದು. (ನಾಯಕನು ಸತ್ತರೂ ಪುನಃ ಬದುಕುವುದಾದರೆ ಆ ಮರಣವನ್ನು ತೋರಿಸಬಹುದು. ಉದಾ—ನಾಗಾನಂದದಲ್ಲಿ ಜೀಮೂತವಾಹನನ ಮರಣ.)

೪೧ ಅಂಕರಚನೆಯರೀತಿ—

**ಏಕಾಹಾಚರಿತೈಕಾರ್ಥಮಿತ್ಥಮಾಸನ್ನನಾಯಕಂ || ೩೬ ||**
**ಪಾತ್ರೈಸ್ತ್ರಿಚತುರೈರಂಕಂ ತೇಷಾಮಂತೇಽಸ್ಯನಿರ್ಗಮಃ |**

**ತಾ**—ಅಂಕವು ಒಂದು ದಿನದಲ್ಲಿ ನಡೆಯುವ ಘಟನೆಯಿಂದ ಕೂಡಿರಬೇಕು, ಅದರಲ್ಲಿ ಒಂದು ಪ್ರಯೋಜನವಿರಬೇಕು. ಅಂಕದಲ್ಲಿ ನಾಯಕನು ಇರಲೇಬೇಕು. ಮೂರು ಅಥವಾ ನಾಲ್ಕು ಪಾತ್ರಗಳಿರಬೇಕು. ಅಂಕದ ಕೊನೆಯಲ್ಲಿ ಪಾತ್ರಗಳು ನಿರ್ಗಮಿಸಬೇಕು.

**೪೨ ಅಂಕರಚನೆಯ ರೀತಿ—**

**ಪತಾಕಾಸ್ಥಾನಕಾನ್ಯತ್ರಬಿಂದುರಂತೇಚಬೀಜವತ್ ॥ ೩೭ ॥**
**ಏವಮಂಕಾಃ ಪ್ರಕರ್ತವ್ಯಾಃ ಪ್ರವೇಶಾದಿಪುರಸ್ಕೃತಾಃ ।**

ತಾ—ಅತ್ರ=ಅಲ್ಲಿ, ಅಂದರೆ ಅಂಕದಲ್ಲಿ 'ಪತಾಕಾಸ್ಥಾನಕ'ಗಳನ್ನು ಬಿಂದುವನ್ನು ಮತ್ತು ಅಂತ್ಯದಲ್ಲಿ ಬೀಜದ ಪರಾಮರ್ಶೆಯನ್ನೂ ಯೋಜಿಸತಕ್ಕದ್ದು. ಈ ರೀತಿಯಲ್ಲಿ ಪ್ರವೇಶಕಾದಿ ಸಹಿತವಾಗಿ ಅಂಕಗಳನ್ನು ರಚಿಸತಕ್ಕದ್ದು.

**೪೩ ನಾಟಕದಲ್ಲಿ ಅಂಕಗಳು—**

**ಪಂಚಾಂಕಮೇತದವರಂ ದಶಾಂಕಂ ನಾಟಕಂ ಪರಂ ॥ ೩೮ ॥**

ತಾ—ಐದು ಅಂಕಗಳಿದ್ದರೆ ಸಾಮಾನ್ಯ. (ಐದಕ್ಕಿಂತ ಕಡಿಮೆ ಅಂಕಗಳಿರಕೂಡದು.) ಹತ್ತು ಅಂಕಗಳಿದ್ದರೆ ಶ್ರೇಷ್ಠ, (ಹನೂಮನ್ನಾಟಕದಲ್ಲಿ ಹದಿನಾಲ್ಕು ಅಂಕಗಳಿವೆ. ಹೀಗೆ ಹತ್ತಕ್ಕಿಂತ ಹೆಚ್ಚು ಅಂಕಗಳುಳ್ಳ ನಾಟಕಕ್ಕೆ ಮಹಾ-ನಾಟಕವೆಂದು ಹೆಸರು.)

## ಪ್ರಕರಣಲಕ್ಷಣ

**೪೪ ಪ್ರಕರಣದವೃತ್ತ ಮತ್ತು ನಾಯಕ—**

**ಅಥಪ್ರಕರಣೇ ವೃತ್ತಮುತ್ಪಾದ್ಯಂ ಲೋಕಸಂಶ್ರಯಂ ।**
**ಅಮಾತ್ಯವಿಪ್ರವಣಿಜಾಮೇಕಂ ಕುರ್ಯಾಚ್ಚನಾಯಕಂ ॥ ೩೯ ॥**
**ಧೀರಪ್ರಶಾಂತಂಸಾಪಾಯಂ ಧರ್ಮಕಾಮಾರ್ಥತತ್ಪರಂ ।**
**ಶೇಷಂ ನಾಟಕವತ್ಸಂಧಿಪ್ರವೇಶಕರಸಾದಿಕಂ ॥ ೪೦ ॥**

ತಾ—ಪ್ರಕರಣದಲ್ಲಿ ಜಗತ್ತಿನಲ್ಲಿ ನಡೆಯಬಹುದಾದ ಕವಿ ಬುದ್ಧಿಯಿಂದ ರಚಿತವಾದ ಇತಿವೃತ್ತವಿರಬೇಕು. (ಉತ್ಪಾದ್ಯ) ಅದರಲ್ಲಿ ಮಂತ್ರಿ, ಬ್ರಾಹ್ಮಣ, ವೈಶ್ಯ ಇವರಲ್ಲಿ ಒಬ್ಬನು ನಾಯಕನಾಗಿರತಕ್ಕದ್ದು. ಆ ನಾಯಕನು ಧರ್ಮಾರ್ಥ ಕಾಮಗಳಲ್ಲಿ ಆಸಕ್ತಿಯುಳ್ಳವನಾಗಿದ್ದು 'ಧೀರಪ್ರಶಾಂತ' ವರ್ಗದವನಾಗಿರಬೇಕು.

ವಿಪತ್ತುಗಳ ಮೂಲಕ ಅವನಿಗೆ ಫಲಲಾಭವಾಗಬೇಕು. ಸಂಧಿ, ಪ್ರವೇಶಕ, ರಸ ಮುಂತಾದ ಉಳಿದ ವಿಷಯಗಳು ನಾಟಕದಂತೆಯೇ ಯೋಜಿತವಾಗತಕ್ಕದ್ದು.

೪೫ ಪ್ರಕರಣದನಾಯಿಕೆ—

**ನಾಯಿಕಾತುದ್ವಿಧಾನೇತುಃ ಕುಲಸ್ತ್ರೀಗಣಿಕಾ ತಥಾ ।**
**ಕ್ವಚಿದೇಕೈವ ಕುಲಜಾ ವೇಶ್ಯಾಕ್ವಾಪಿದ್ವಯಂಕ್ವಚಿತ್ ॥ ೪೧ ॥**
**ಕುಲಜಾಭ್ಯಂತರಾಬಾಹ್ಯಾ ವೇಶ್ಯಾನಾತಿಕ್ರಮೋಽನಯೋಃ ।**
**ಆಭಿಃ ಪ್ರಕರಣಂ ತ್ರೇಧಾಸಂಕೀರ್ಣಂಧೂರ್ತಸಂಕುಲಂ ॥ ೪೨ ॥**

**ತಾ**—ಪ್ರಕರಣದಲ್ಲಿ ನಾಯಿಕೆ ಎರಡು ವಿಧ ; ನಾಯಕನ ಪತ್ನಿಯಾಗಿರುವ ಕುಲಸ್ತ್ರೀ ಮತ್ತು ವೇಶ್ಯೆ. ಕೆಲವುಬಾರಿ ಕುಲಸ್ತ್ರೀಯೊಬ್ಬಳೇ, ಕೆಲವುಬಾರಿ ವೇಶ್ಯೆ ಮಾತ್ರವೇ ಪ್ರಕರಣದಲ್ಲಿ ನಾಯಿಕೆಯಾಗಿರಬಹುದು, ಕೆಲವು ಬಾರಿ ಕುಲಸ್ತ್ರೀ ಗಣಿಕೆ ಇಬ್ಬರೂ ನಾಯಿಕೆಯರಾಗಿರಬಹುದು. ಕುಲಸ್ತ್ರೀಯು ಮನೆಯೊಳಗೆ ಇರುವವಳು. ವೇಶ್ಯೆಯು ನಾಯಕನ ಮನೆಯ ಹೊರಗೆ ಇರುವವಳು. ಇದರಲ್ಲಿ ಹೆಚ್ಚು ಕಡಿಮೆಯಾಗಬಾರದು. ಹೀಗೆ ಕುಲಜಾನಾಯಿಕಾ, ವೇಶ್ಯಾನಾಯಿಕಾ, ಉಭಯನಾಯಿಕಾ ಇವರುಗಳಿಂದ ಪ್ರಕರಣವು ಮೂರು ವಿಧವಾಗಿದೆ. ಧೂರ್ತ ಜನರಿಂದ ಕೂಡಿದ್ದರೆ ಪ್ರಕರಣವು 'ಸಂಕೀರ್ಣ' ಎನ್ನಿಸಿಕೊಳ್ಳುತ್ತದೆ.

ಉದಾ—ವೇಶಃ—ಕೂಲಿಯಿಂದ ಜೀವಿಸುವವಳು ವೇಶ್ಯೆ. ವೇಶ್ಯಾ ವಿಶೇಷವೇ ಗಣಿಕೆ. ತರಂಗದತ್ತಾದಲ್ಲಿ ವೇಶ್ಯಾನಾಯಿಕೆ ; ಪುಷ್ಪದೂಷಿತಕದಲ್ಲಿ ಕುಲಜಾನಾಯಿಕೆ. ಇವೆರಡೂ ಪ್ರಕ್ಷಿಪ್ತ ರೂಪಕಗಳು. ಮೃಚ್ಛಕಟಿಕದಲ್ಲಿ ಉಭಯನಾಯಿಕೆ.

## ನಾಟಿಕಾಲಕ್ಷಣ

೪೬ **ಲಕ್ಷ್ಯತೇ ನಾಟಿಕಾಪ್ಯತ್ರ ಸಂಕೀರ್ಣಾನ್ಯನಿವೃತ್ತಯೇ ।**

**ತಾ**—ಇಲ್ಲಿ ನಾಟಕೆಯಂತೆಯೇ ಇರುವ ದಶರೂಪಕಗಳಲ್ಲದ ಹದಿನೆಂಟು

ಉಪರೂಪಕಗಳನ್ನು ನಿವಾರಿಸುವ ಸಲುವಾಗಿ 'ನಾಟಿಕಾ' ಲಕ್ಷಣವನ್ನು ಹೇಳಿದೆ. (ನಾಟಿಕಾ ಉಪರೂಪಕ. ದಶರೂಪಕಗಳಲ್ಲಿ ಸೇರಿಲ್ಲ. ನಾಟಕ ಪ್ರಕರಣಗಳೆರಡರ ಅಂಶಗಳಿಂದ ರಚಿತವಾದುದು. ಭರತ ಮುನಿಯು ದಶರೂಪಕ ಗಳ ಜೊತೆಗೆ 'ನಾಟಿಕೆ'ಗೂ ಲಕ್ಷಣ ಹೇಳಿದ್ದರಿಂದ ಇಲ್ಲಿ ಅದನ್ನು ಪ್ರಸ್ತಾಪಿಸಿದೆ.)

**೪೭ ವಸ್ತು, ನಾಯಕ, ರಸ—**

**ತತ್ರ ವಸ್ತು ಪ್ರಕರಣಾನ್ನಾಟಕಾನ್ನಾಯಕೋನೃಪಃ ॥ ೪೩ ॥**
**ಪ್ರಖ್ಯಾತೋಧೀರಲಲಿತಃ ಶೃಂಗಾರೋಂಗೀಸಲಕ್ಷಣಃ ।**

ತಾ—ನಾಟಿಕಾದಲ್ಲಿ ಪ್ರಕರಣದಂತೆ ವಸ್ತುವು ಕವಿಕಲ್ಪಿತ. ನಾಯಕನು ನಾಟಕದಂತೆ ಪ್ರಖ್ಯಾತನೂ, ಧೀರಲಲಿತನೂ ಆದ ರಾಜ, ಎಲ್ಲ ಲಕ್ಷಣಗಳಿಂದ ಕೂಡಿದ ಶೃಂಗಾರವು ಪ್ರಧಾನರಸ.

**೪೮ ನಾಟಿಕೆಯವಿಶೇಷ—**

**ಸ್ತ್ರೀಪ್ರಾಯಚತುರಂಕಾದಿ ಭೇದಕಂಯದಿಚೇಷ್ಯತೇ ॥ ೪೪ ॥**
**ಏಕದ್ವಿತ್ರ್ಯಂಕಪಾತ್ರಾದಿಭೇದೇನಾನಂತರೂಪತಾ ।**

ತಾ—'ನಾಟಿಕಾ' ಎಂಬ ಸ್ತ್ರೀಲಿಂಗದ ಸಂಜ್ಞೆಗನುಸಾರವಾಗಿ ಅಲ್ಲಿ ಸ್ತ್ರೀ-ಪಾತ್ರ ಬಾಹುಲ್ಯವಿರುತ್ತದೆ. ಒಂದು, ಎರಡು, ಮೂರು, ನಾಲ್ಕು ಅಂಕಗಳು ಇರಬಹುದು, ಪಾತ್ರ ಸಂಖ್ಯೆಯಲ್ಲಿ ಭೇದವಿರಬಹುದು. ಆದಕಾರಣ 'ನಾಟಿಕಾ ದಲ್ಲಿ ಅನೇಕಾನೇಕ ರೂಪಗಳುಂಟಾಗುತ್ತವೆ. (ಇದರಲ್ಲಿ ಕೈಶಿಕೀವೃತ್ತಿ ; ನರ್ಮಾದಿ ನಾಲ್ಕು ಅಂಗಗಳು ; ಅವಮರ್ಶಸಂಧಿ ಬಹು ಸ್ವಲ್ಪವಾದ ಕಾರಣ ನಾಲ್ಕು ಅಂಕಗಳು ಸರಿಹೊಂದುತ್ತವೆ.

**೪೯ ಅಲ್ಲಿ ಜ್ಯೇಷ್ಠಾನಾಯಿಕೆ—**

**ದೇವೀತತ್ರಭವೇಜ್ಜ್ಯೇಷ್ಠಾಪ್ರಗಲ್ಭಾನೃಪವಂಶಜಾ ॥ ೪೫ ॥**
**ಗಂಭೀರಾ ಮಾನಿನೀ ಕೃಚ್ಛ್ರಾತ್ತದ್ವಶಾನ್ನೇತೃ ಸಂಗಮಃ ।**

ತಾ—ನಾಟಿಕೆಯಲ್ಲಿ ಜ್ಯೇಷ್ಠಾ ಕನಿಷ್ಠಾ ಎಂಬುದಾಗಿ ಇಬ್ಬರು ನಾಯಿಕೆಯರಿರುತ್ತಾರೆ. ಜ್ಯೇಷ್ಠಾನಾಯಿಕೆಯು ರಾಣಿಯೂ, ಪ್ರಗಲ್ಭೆಯೂ, ರಾಜವಂಶದವಳೂ, ಗಂಭೀರೆಯೂ, ಮಾನವತಿಯೂ ಆಗಿರುತ್ತಾಳೆ. ಇವಳಿಂದಾಗಿ ಕಿರಿಯ ನಾಯಿಕೆಯ ಸಂಗಡ ನಾಯಕನ ಸಮಾಗಮವು ಕಷ್ಟಸಾಧ್ಯವಾಗುತ್ತದೆ. ಅವರಿಬ್ಬರ ಸಮಾಗಮವು ಜ್ಯೇಷ್ಠಾನಾಯಿಕೆಯ ಅಧೀನವಾಗಿರುತ್ತದೆ.

**೫೦ ಅಲ್ಲಿ ಕನಿಷ್ಠಾನಾಯಿಕೆ—**

**ನಾಯಿಕಾತಾದೃಶೀ ಮುಗ್ಧಾ ದಿವ್ಯಾಚಾತಿಮನೋಹರಾ ॥ ೪೬ ॥**

ತಾ—ಜ್ಯೇಷ್ಠೆಯಂತೆಯೇ ಕನಿಷ್ಠಳೂ, ರಾಜವಂಶದವಳು, ಮುಗ್ಧೆ, ದಿವ್ಯಳು ಮತ್ತು ತುಂಬ ಮನೋಹರಳೂ ಆಗಿರುತ್ತಾಳೆ. (ಇವಳು ಮುಂದೆ ನಾಯಕನಿಗೆ ದೊರಕುವಳು.)

**೫೧ ನಾಯಕನಾಯಿಕಾಸಂಬಂಧ—**

**ಅಂತಃಪುರಾದಿಸಂಬಂಧಾದಾಸನ್ನಾ ಶ್ರುತಿದರ್ಶನೈಃ ।**
**ಅನುರಾಗೋನವಾವಸ್ಥೋ ನೇತುಸ್ತಸ್ಯಾಂ ಯಥೋತ್ತರಂ ॥ ೪೭ ॥**
**ನೇತಾತತ್ರಪ್ರವರ್ತೇತ ದೇವೀತ್ರಾಸೇನ ಶಂಕಿತಃ ।**

ತಾ—ನಾಯಿಕೆಯು ಅಂತಃಪುರ ಮುಂತಾದವುಗಳ ಸಂಬಂಧದಿಂದ ನಾಯಕನಿಗೆ ನಿತ್ಯವೂ ಕೇಳುವಂತೆ ಕಾಣುವಂತೆ ಇರುವುದರಿಂದ ನಾಯಕನಲ್ಲಿ ಉತ್ತರೋತ್ತರವಾಗಿ ಅನುರಾಗದ ನೂತನ ಅವಸ್ಥೆಯು ಉಂಟಾಗುತ್ತದೆ. ಅಲ್ಲಿ ನಾಯಕನು ಜ್ಯೇಷ್ಠಾನಾಯಿಕೆಯ ಭಯದಿಂದ ಸಂಶಯಚಿತ್ತನಾಗಿ ನಡೆದುಕೊಳ್ಳುತ್ತಾನೆ.

**೫೨ ಕೈಶಿಕೀವೃತ್ತಿಯೋಜನೆ—**

**ಕೈಶಿಕ್ಯಂಗೈಶ್ಚತುರ್ಭಿಶ್ಚಯುಕ್ತಾಂಕೈರಿವನಾಟಿಕಾ**

ತಾ—ನಾಟಿಕಾದಲ್ಲಿ ಕೈಶಿಕೀ ವೃತ್ತಿಯ ನಾಲ್ಕು ಅಂಗಗಳು ಅದರ ನಾಲ್ಕು ಅಂಕಗಳೊಡನೆ ಹೊಂದಿಕೊಂಡಂತೆ ಇರುತ್ತವೆ.

(ನಾಯಕನ ಕಾರ್ಯವಿಶೇಷಗಳಿಂದ ಸಿದ್ಧವಾಗುವ ವ್ಯಾಪಾರವು ವೃತ್ತಿ. ಅದು ನಾಲ್ಕು ವಿಧ–ಕೈಶಿಕೀ, ಸಾತ್ತ್ವತೀ, ಆರಭಟೀ, ಭಾರತೀ. ಶೃಂಗಾರದಲ್ಲಿ ಕೈಶಿಕೀ, ವೀರದಲ್ಲಿ ಸಾತ್ತ್ವತೀ, ರೌದ್ರ, ಭೀಭತ್ಸಗಳಲ್ಲಿ ಆರಭಟೀ ಮತ್ತು ಈ ಎಲ್ಲ ಎಡೆಗಳಲ್ಲಿಯೂ ಭಾರತೀವೃತ್ತಿಯಿರುತ್ತದೆ. ಕೈಶಿಕೀವೃತ್ತಿಗೆ ನರ್ಮ, ನರ್ಮಸ್ಫಿಂಜ, ನರ್ಮಸ್ಫೋಟ, ನರ್ಮಗರ್ಭ ಎಂಬ ನಾಲ್ಕು ಅಂಗಗಳು. ಪ್ರಿಯನನ್ನು ಅಥವಾ ಪ್ರಿಯಳನ್ನು ಪ್ರಸನ್ನಗೊಳಿಸುವ ಕುಶಲವಾದ ಕ್ರೀಡೆ ನರ್ಮ. ನೂತನ ಸಮಾಗಮದಲ್ಲಿ ಉಂಟಾಗುವ ಆರಂಭದ ಸುಖ–ಕೊನೆಯ ಭಯ–'ನರ್ಮಸ್ಫಿಂಜ'. ಲೇಶಮಾತ್ರ ಭಾವಗಳಿಂದ ಸ್ವಲ್ಪ ರಸಸೂಚನೆಯು 'ನರ್ಮಸ್ಫೋಟ.' ಯಾವುದಾದರೊಂದು ಪ್ರಯೋಜನಕ್ಕಾಗಿ, ಗುಪ್ತನಾಗಿದ್ದ ನಾಯಕನು ಹೊರಬರುವುದು 'ನರ್ಮಗರ್ಭ'.)

## ಭಾಣದ ಲಕ್ಷಣ

೫೩. ಭಾಣದ ಲಕ್ಷಣಗಳು

**ಭಾಣಸ್ತು ಧೂರ್ತಚರಿತಂ ಸ್ವಾನುಭೂತಂ ಪರೇಣವಾ ।**
**ಯತ್ರೋಪವರ್ಣಯೇದೇಕೋ ನಿಪುಣಃ ಪಂಡಿತೋವಿಟಃ ॥೪೯**

**ಸಂಬೋಧನೋಕ್ತಿಪ್ರತ್ಯುಕ್ತೀ ಕುರ್ಯಾದಾಕಾಶಭಾಷಿತೈಃ ।**
**ಸೂಚಯೇದ್ವೀರಶೃಂಗಾರೌ ಶೌರ್ಯಸೌಭಾಗ್ಯಸಂಸ್ತವೈಃ ॥೫೦॥**

**ಭೂಯಸಾ ಭಾರತೀವೃತ್ತಿರೇಕಾಂಕಂ ವಸ್ತುಕಲ್ಪಿತಂ ।**
**ಮುಖನಿರ್ವಹಣೇಸಾಂಗೇಲಾಸ್ಯಾಂಗಾನಿ ದಶಾಪಿಚ ॥೫೧॥**

**ತಾ**—ಚತುರನೂ ಬುದ್ಧಿವಂತನೂ ಆದ ವಿಟನೊಬ್ಬನು ತನ್ನ ಸ್ವಂತದ ಅಥವಾ ಬೇರೊಬ್ಬರ ಧೂರ್ತಚರಿತ್ರೆಯನ್ನು ವರ್ಣಿಸಿದರೆ 'ಭಾಣ'ವಾಗುತ್ತದೆ. ಧೂರ್ತರೆಂದರೆ ಕಳ್ಳ ಜೂಜುಗಾರ ಮುಂತಾದವರು. ಇಲ್ಲಿ ಒಂದೇಪಾತ್ರ. ಸಂಬೋಧನೆ, ಮಾತು ಮರುಮಾತುಗಳನ್ನು ಆಕಾಶಭಾಷಿತದ ಮೂಲಕ ಮಾಡತಕ್ಕದ್ದು. ಅಲ್ಲಿಯ ಏಕಪಾತ್ರವು ಕಥಾನಾಯಕ, ಅಥವಾ ಬೇರೆಯುವನೂ ಆಗಿರಬಹುದು. ಶೌರ್ಯ ಸೌಭಾಗ್ಯಗಳನ್ನು ಹೊಗಳುತ್ತ ವೀರ ಶೃಂಗಾರ

ರಸಗಳನ್ನು ಸೂಚಿಸತಕ್ಕದ್ದು. ಇಲ್ಲಿ ವಿಶೇಷವಾಗಿ ಭಾರತೀವೃತ್ತಿ. ಒಂದೇ ಅಂಕ, ವಸ್ತು ಕಲ್ಪಿತ; ಅಂಗಸಮೇತವಾದ ಮುಖ ನಿರ್ವಹಣ ಸಂಧಿಗಳೂ ಮತ್ತು ಲಾಸ್ಯದ ಹತ್ತು ಅಂಗಗಳೂ ಇರತಕ್ಕದ್ದು. (ಏಕಪಾತ್ರಾಭಿನಯವೇ ಭಾಣದ ಮುಖ್ಯ ವೈಶಿಷ್ಟ್ಯ. ಅವಕಾಶ ಕಡಿಮೆಯಾಗಿರುವುದರಿಂದ ರಸಗಳ ಸೂಚನೆ ಮಾತ್ರ ಇರುತ್ತದೆ.)

೫೪ ಲಾಸ್ಯಾಂಗಗಳು ೧೦.

**ಗೇಯಂ ಪದಂ ಸ್ಥಿತಂ ಪಾಠ್ಯಂ ಆಸೀನಂ ಪುಷ್ಪಗಂಡಿಕಾ ।**
**ಪ್ರಚ್ಛೇದಕಸ್ತ್ರಿಗೂಢಂಚ ಸೈಂಧವಾಖ್ಯಂ ದ್ವಿಗೂಢಕಂ ॥ ೫೨ ॥**

**ಉತ್ತಮೋತ್ತಮಕಂ ಚೈವ ಉಕ್ತಪ್ರತ್ಯುಕ್ತಮೇವ ಚ ।**
**ಲಾಸ್ಯೇ ದಶವಿಧಂಹ್ಯೇತದಂಗನಿರ್ದೇಶಕಲ್ಪನಂ ॥ ೫೩ ॥**

**ತಾ**–ಗೇಯಪದ, ಸ್ಥಿತಪಾಠ್ಯ, ಆಸೀನಪಾಠ್ಯ, ಪುಷ್ಪಗಂಡಿಕಾ, ಪ್ರಚ್ಛೇದಕ, ತ್ರಿಗೂಢ, ಸೈಂಧವ, ದ್ವಿಗೂಢ, ಉತ್ತಮೋತ್ತಮ, ಉಕ್ತಪ್ರತ್ಯುಕ್ತ ಎಂಬುದಾಗಿ ಲಾಸ್ಯದಲ್ಲಿ ಹತ್ತು ಅಂಗಗಳು ಕಲ್ಪಿತವಾಗಿವೆ. (ಇವುಗಳ ಲಕ್ಷಣಗಳನ್ನು ನಾಟ್ಯಶಾಸ್ತ್ರ ಮತ್ತು ಸಾಹಿತ್ಯದರ್ಪಣದಲ್ಲಿ ನೋಡಬೇಕು.)

**ಪ್ರಹಸನ ಲಕ್ಷಣ**

**೫೫ ಪ್ರಹಸನ ಪ್ರಕಾರಗಳು**

**ತದ್ವತ್ ಪ್ರಹಸನಂ ತ್ರೇಧಾಶುದ್ಧವೈಕೃತಸಂಕರೈಃ ।**

ತಾ—ಭಾಣದಂತೆಯೇ ಪ್ರಹಸನದಲ್ಲಿ, ಶುದ್ಧ, ವೈಕೃತ, ಸಂಕರ ಎಂದು ಮೂರು ವಿಧ. ವಸ್ತು, ಸಂಧಿ, ಸಂಧ್ಯಂಗ, ಲಾಸ್ಯ ಮೊದಲಾದವುಗಳಲ್ಲಿ ಪ್ರಹಸನವು ಭಾಣವನ್ನು ಹೋಲುತ್ತದೆ.

**೫೬ ಶುದ್ಧಪ್ರಹಸನ ಲಕ್ಷಣ**

**ಪಾಷಂಡವಿಪ್ರಪ್ರಭೃತಿಚೇಟಚೇಟೀಸಮಾಕುಲಂ ॥ ೫೪ ॥**
**ಚೇಷ್ಟಿತಂ ವೇಷಭಾಷಾಭಿಃ ಶುದ್ಧಂ ಹಾಸ್ಯವಚೋऽನ್ವಿತಂ ।**

ತಾ—ಪಾಖಂಡಿಗಳು, ಬ್ರಾಹ್ಮಣರು, ಮುಂತಾದವರು, ಚೇಟ, ಚೇಟಿಯರು ವಿಟರುಗಳಿಂದ ಕೂಡಿದ್ದು, ಅದಕ್ಕೆ ಹೊಂದುವ ವೇಷ ಭಾಷೆ ಚೇಷ್ಟೆ ಹಾಸ್ಯಕರವಾದ ಮಾತುಗಳಿಂದ ತುಂಬಿದ್ದರೆ 'ಶುದ್ಧ' (ಪಾಖಂಡಿ=ಶಾಕ್ಯ ನಿರ್ಗ್ರಂಥಕರೆಂಬ ಬೌದ್ಧ ಜೈನಕುಲದ ಕಪಟಸನ್ಯಾಸಿಗಳು. ವಿಪ್ರರು= ಜಾತಿಯ ಹೆಸರಿನಲ್ಲಿ ಜೀವಿಸುವವರು ಅಥವಾ ತುಂಬ ಸರಳರು.)

೫೭ ವಿಕೃತಸಂಕೀರ್ಣ ಪ್ರಹಸನಗಳು

**ಕಾಮುಕಾದಿವಚೋವೇಷೈಃ ಷಂಢಕಂಚುಕಿತಾಪಸೈಃ || ೫೫ ||**
**ವಿಕೃತಂ ಸಂಕರಾದ್ವೀಥ್ಯಾ ಸಂಕೀರ್ಣಂ ಧೂರ್ತಸಂಕುಲಂ |**

ತಾ—ನಪುಂಸಕರು, ಕಂಚುಕಿಗಳು, ತಾಪಸರು ಮುಂತಾದ ಪಾತ್ರಗಳು ಕಾಮುಕರೇ ಮುಂತಾದವರ ವೇಷ ಭಾಷೆಗಳ ಮೂಲಕ ವ್ಯವಹರಿಸಿದರೆ ಅದು ವಿಕೃತ ಪ್ರಹಸನ. ಧೂರ್ತಪಾತ್ರಗಳಿಂದ ಕೂಡಿ ಅದು ವೀಥಿಯ ಅಂಗಗಳೊಡನೆ ಬೆರೆತರೆ 'ಸಂಕೀರ್ಣ'

೫೮ ಪ್ರಹಸನದಲ್ಲಿ ರಸ

**ರಸಸ್ತು ಭೂಯಸಾ ಕಾರ್ಯಃ ಷಡ್ವಿಧೋ ಹಾಸ್ಯ ಏವ ತು || ೫೬ ||**

ತಾ—ಪ್ರಹಸನದಲ್ಲಿ ಆರು ವಿಧವಾದ 'ಹಾಸ್ಯ'ವನ್ನೇ ವಿಶೇಷರಸವನ್ನಾಗಿ ಯೋಜಿಸತಕ್ಕದ್ದು (೧ ಸ್ಮಿತ=ಕಣ್ಣು ಅರಳಿಸುವುದು. ೨ ಹಸಿತ =ಸ್ವಲ್ಪ ಹಲ್ಲು ಕಾಣಿಸುವುದು. ೩ ವಿಹಸಿತ=ಮಧುರವಾದ ಧ್ವನಿ ಉಳ್ಳದ್ದು. ೪ ಉಪಹಸಿತ=ತಲೆಯ ಕಂಪನದಿಂದ ಕೂಡಿದ್ದು, ೫ ಅಪಹಸಿತ=ಕಣ್ಣಲ್ಲಿ ನೀರು ಬರುವುದು ೬ ಅತಿಹಸಿತ = ಅಂಗಗಳು ಕುಣಿಯುವುದು. ಇವು ಹಾಸ್ಯದ ಆರು ವಿಧಗಳು)

೫೯ ಡಿಮದ ಲಕ್ಷಣ

**ಡಿಮೇ ವಸ್ತು ಪ್ರಸಿದ್ಧಂ ಸ್ಯಾತ್ ವೃತ್ತಯಃ ಕೈಶಿಕೀಂ ವಿನಾ |**
**ನೇತಾರೋ ದೇವಗಂಧರ್ವಯಕ್ಷರಕ್ಷೋ ಮಹೋರಗಾಃ ||೫೭||**

**ಭೂತಪ್ರೇತಪಿಶಾಚಾದ್ಯಾಃ ಷೋಡಶಾತ್ಯಂತಮುದ್ಧತಾಃ ।**
**ರಸೈರಹಾಸ್ಯಶೃಂಗಾರೈಃ ಷಡ್ಭಿರ್ದೀಪ್ತೈಃ ಸಮನ್ವಿತಃ ॥ ೫೮ ॥**

**ಮಾಯೇಂದ್ರಜಾಲಸಂಗ್ರಾಮಕ್ರೋಧೋದ್ಭ್ರಾಂತಾದಿ**
**ಚೇಷ್ಟಿತೈಃ ।**
**ಚಂದ್ರಸೂರ್ಯೋಪರಾಗೈಶ್ಚ ನ್ಯಾಯ್ಯೇ ರೌದ್ರೇ ರಸೇಂಗಿನಿ ॥೫೯॥**

**ಚತುರಂಕಶ್ಚತುಃಸಂಧಿರ್ನಿರ್ವಿಮರ್ಶೋ ಡಿಮಃ ಸ್ಮೃತಃ ।**

**ತಾ**—ಡಿಮದಲ್ಲಿ ವಸ್ತು ಪ್ರಸಿದ್ಧ; ಕೈಶಿಕಿಯನ್ನುಳಿದು ಇತರ ವೃತ್ತಿಗಳು ಇರಬೇಕು; ದೇವತೆಗಳು, ಗಂಧರ್ವರು, ಯಕ್ಷರು, ರಾಕ್ಷಸರು, ಮಹೋರಗರು, ಭೂತಗಳು, ಪ್ರೇತಗಳು, ಪಿಶಾಚ ಮುಂತಾದವು. ಹೀಗೆ ಹದಿನಾರು ಉದ್ಧತ ನಾಯಕರು. ಮಾಯೆ, ಇಂದ್ರಜಾಲ, ಯುದ್ಧ, ಕೋಪ ಮುಂತಾದ ವ್ಯಾಪಾರಗಳಿಂದಲೂ, ಸೂರ್ಯಗ್ರಹಣ ಚಂದ್ರಗ್ರಹಣಗಳಿಂದಲೂ ಡಿಮವು ಕೂಡಿರುತ್ತದೆ. ಹಾಸ್ಯಶೃಂಗಾರಗಳನ್ನು ಬಿಟ್ಟು ಉಳಿದ ಆರು ರಸಗಳಿಂದಲೂ ಡಿಮವು ಉಜ್ಜ್ವಲವಾಗಿರುತ್ತದೆ. ಆದರೆ ಡಿಮದಲ್ಲಿ ನ್ಯಾಯವಾಗಿ 'ರೌದ್ರ'ವೇ ಪ್ರಧಾನರಸವು. ಇಲ್ಲಿ ನಾಲ್ಕು ಅಂಕಗಳು, ವಿಮರ್ಶಸಂಧಿಯನ್ನು ಬಿಟ್ಟು ಉಳಿದ ನಾಲ್ಕು ಸಂಧಿಗಳು ಇರತಕ್ಕದ್ದು: (ಡಿಮ ಎಂದರೆ ಸಂಘಾತ, ಪೆಟ್ಟು. ನಾಯಕ ಸಂಘಾತ ವ್ಯಾಪಾರವೇ ಡಿಮ.) ಪ್ರಸ್ತಾವನೆ ಮುಂತಾದ್ದು ನಾಟಕದಂತೆಯೇ. 'ತ್ರಿಪುರದಾಹ'ದ ವಸ್ತುವನ್ನು ಹೋಲುವ ಇತಿವೃತ್ತಗಳು ಡಿಮಕ್ಕೆ ಹೊಂದುತ್ತವೆಯೆಂದು ಭರತ ಮುನಿಯ ಮತ.

### ೬೦ ವ್ಯಾಯೋಗಲಕ್ಷಣ

**ಖ್ಯಾತೇತಿವೃತ್ತೋ ವ್ಯಾಯೋಗಃ ಖ್ಯಾತೋದ್ಧತನ-**
**ರಾಶ್ರಯಃ ॥ ೬೦ ॥**

**ಹೀನೋಗರ್ಭವಿಮರ್ಶಾಭ್ಯಾಂ ದೀಪ್ತಾಃ ಸ್ಯುರ್ಡಿಮವದ್ರಸಾಃ ।**
**ಅಸ್ತ್ರೀನಿಮಿತ್ತಸಂಗ್ರಾಮೋ ಜಾಮದಗ್ನ್ಯಜಯೇ ಯಥಾ ॥೬೧॥**

**ಏಕಾಹಾಚರಿತೈಕಾಂಕೋ ವ್ಯಾಯೋಗೋ ಬಹುಭಿರ್ನರೈಃ ।**

ತಾ—ವ್ಯಾಯೋಗವು ಪ್ರಖ್ಯಾತವಾದ ಕಥೆಯಿಂದ ಕೂಡಿರಬೇಕು. ಪ್ರಖ್ಯಾತನಾದ ಉದ್ಧತ ಮನುಷ್ಯನನ್ನು ಆಶ್ರಯಿಸಿರತಕ್ಕದ್ದು. ಗರ್ಭ ಮತ್ತು ವಿಮರ್ಶಸಂಧಿಗಳನ್ನು ಬಿಟ್ಟು ಉಳಿದ ಮೂರು ಸಂಧಿಗಳಿಂದ ಕೂಡಿರಬೇಕು. ಡಿಮದಂತೆಯೇ ಹಾಸ್ಯಶೃಂಗಾರಗಳನ್ನು ಬಿಟ್ಟು ಉಳಿದ ಆರು ರಸಗಳಿಂದ ಉಜ್ಜ್ವಲವಾಗಿರಬೇಕು. ಪರಶುರಾಮವಿಜಯದಂತೆ ಸ್ತ್ರೀನಿಮಿತ್ತವಲ್ಲದೆ ಬೇರೆ ಕಾರಣಗಳಿಗಾಗಿ ನಡೆದ ಯುದ್ಧದಿಂದ ಕೂಡಿರಬೇಕು. ಒಂದು ದಿನದ ಕಥೆ ಮತ್ತು ಕೇವಲ ಒಂದು ಅಂಕವಿರಬೇಕು. ಅಲ್ಲಿ ಅನೇಕ ಮನುಷ್ಯರು ಪಾತ್ರಗಳಾಗಿ ಇರತಕ್ಕದ್ದು. (ವ್ಯಾಯುಜ್ಯಂತೇ ಬಹವಃ ಪುರುಷಾ ಅಸ್ಮಿನ್ನಿತಿ ವ್ಯಾಯೋಗಃ ಅನೇಕಪುರುಷರಿಂದ ಯೋಜಿಸಲಾದದ್ದು.)

೬೧ ಸಮವಕಾರದ ಲಕ್ಷಣ

**ಕಾರ್ಯಂ ಸಮವಕಾರೇಽಪಿ ಆಮುಖಂ ನಾಟಕಾದಿವತ್ ॥ ೬೨ ॥**
**ಖ್ಯಾತಂ ದೇವಾಸುರಂ ವಸ್ತು ನಿರ್ವಿಮರ್ಶಾಸ್ತು ಸಂಧಯಃ ।**
**ವೃತ್ತಯೋ ಮಂದಕೈಶಿಕ್ಯೋ ನೇತಾರೋ ದೇವದಾನವಾಃ ॥೬೩**
**ದ್ವಾದಶೋದಾತ್ತವಿಖ್ಯಾತಾಃ ಫಲಂ ತೇಷಾಂ ಪೃಥಕ್ ಪೃಥಕ್ ।**
**ಬಹುವೀರರಸಾಃ ಸರ್ವೇ ಯದ್ವದಂಭೋಧಿಮಂಥನೇ ॥ ೬೪ ॥**
**ಅಂಕೈಸ್ತ್ರಿಭಿಸ್ತ್ರಿಕಪಟಃ ತ್ರಿಶೃಂಗಾರಸ್ತ್ರಿವಿದ್ರವಃ ।**
**ದ್ವಿಸಂಧಿರಂಕಃ ಪ್ರಥಮಃ ಕಾರ್ಯೋ ದ್ವಾದಶನಾಲಿಕಃ ॥ ೬೫ ॥**
**ಚತುರ್ದ್ವಿನಾಲಿಕಾವಂತ್ಯೌ ನಾಲಿಕಾ ಘಟಿಕಾದ್ವಯಂ ।**
**ವಸ್ತುಸ್ವಭಾವದೈವಾರಿಕೃತಾಃ ಸ್ಯುಃ ಕಪಟಾಸ್ತ್ರಯಃ ॥ ೬೬ ॥**
**ನಗರೋಪರೋಧಯುದ್ಧೇ ವಾತಾಗ್ನ್ಯಾದಿಕ ವಿದ್ರವಾಃ ।**
**ಧರ್ಮಾರ್ಥಕಾಮೈಃ ಶೃಂಗಾರೋ ನಾತ್ರ ಬಿಂದುಪ್ರವೇಶಕೌ ॥೬೭॥**
**ವೀಥ್ಯಂಗಾನಿ ಯಥಾಲಾಭಂ ಕುರ್ಯಾತ್ ಪ್ರಹಸನೇ ಯಥಾ ।**

ತಾ—ಸಮವಕಾರದಲ್ಲಿ ಕೂಡ ನಾಟಕ ಮೊದಲಾದವುಗಳಂತೆಯೇ 'ಆಮುಖ'ವನ್ನು ಯೋಜಿಸತಕ್ಕದ್ದು. ಅದರಲ್ಲಿ ದೇವತೆಗಳಿಗೆ ಅಥವಾ ದೈತ್ಯರಿಗೆ

ಸಂಬಂಧಿಸಿದ ಪ್ರಖ್ಯಾತವಾದ ವಸ್ತು ಇರತಕ್ಕದ್ದು. ವಿಮರ್ಶವನ್ನುಳಿದು ಇತರ ನಾಲ್ಕು ಸಂಧಿಗಳಿರಬೇಕು. ಕೈಶಿಕಿಯನ್ನುಳಿದು ಇತರವೃತ್ತಿಗಳನ್ನು ಯೋಜಿಸಬೇಕು. (ಸ್ವಲ್ಪ ಕೈಶಿಕೀವೃತ್ತಿಯೂ ಇರಬಹುದು.) ದೇವತೆಗಳು ಅಥವಾ ದಾನವರು ನಾಯಕರು. ಉದಾತ್ತರೂ ಪ್ರಖ್ಯಾತರೂ ಆದ ಅಂತಹ ನಾಯಕರಲ್ಲಿ ಹನ್ನೆರಡು ಪ್ರಕಾರಗಳಿರುತ್ತವೆ. ಆ ಹನ್ನೆರಡು ಬಗೆಯ ನಾಯಕರ ಫಲವೂ ಬೇರೆ ಬೇರೆಯಾಗಿರುತ್ತದೆ. 'ಸಮುದ್ರಮಥನ' ಕಥೆಯಲ್ಲಿ-ರುವಂತೆ ಎಲ್ಲಾ ಬಗೆಯ ನಾಯಕರಲ್ಲಿಯೂ ಬಹುವಾದ ವೀರ ರಸವಿರುತ್ತದೆ. ಸಮವಕಾರದಲ್ಲಿ ಮೂರು ಅಂಕಗಳು ಇದ್ದು ಅವುಗಳಲ್ಲಿ ಮೂರು ಬಗೆಯ ಕಪಟ, ಮೂರು ರೀತಿಯ ಶೃಂಗಾರ, ಮೂರು ಪ್ರಕಾರದ ವಿದ್ರವ (ಗಲಭೆ) ಇರಬೇಕು. ಮೊದಲನೆ ಅಂಕದಲ್ಲಿ ಎರಡು ಸಂಧಿಗಳನ್ನು ಹನ್ನೆರಡು ನಾಲಿಕಾ ಕಾಲ ಪ್ರಮಾಣದಲ್ಲಿ ಯೋಜಿಸತಕ್ಕದ್ದು. ಎರಡು ಮತ್ತು ಮೂರನೇ ಅಂಕ ಗಳು ಕ್ರಮವಾಗಿ ನಾಲ್ಕು ಮತ್ತು ಎರಡು ನಾಲಿಕಾಕಾಲಪ್ರಮಾಣವನ್ನು ಹೊಂದಿರುತ್ತವೆ. ಒಂದು ನಾಲಿಕಾ ಎಂದರೆ ಎರಡು ಘಳಿಗೆ. (೧ ಘಳಿಗೆ= ೨೪ ನಿಮಿಷ) ಸಮವಕಾರದಲ್ಲಿ ಮೂರು ಬಗೆಯಕಪಟ, ಇರತಕ್ಕದ್ದೆಂದು ಹೇಳಿದೆಯಷ್ಟೆ. ಅವುಗಳು ವಸ್ತುಸ್ವಭಾವದಿಂದ ಉಂಟಾದುವು, ದೈವದಿಂದ ಉಂಟಾದುವು, ಶತ್ರುವಿನಿಂದ ಉಂಟಾದುವು, ಹೀಗೆ ಮೂರು ಕಪಟಗಳಾಗುತ್ತವೆ. ನಗರವನ್ನು ಮುತ್ತುವುದು, ಯುದ್ಧ, ಗಾಳಿ, ಬೆಂಕಿ ಇವುಗಳಿಂದ ಹುಟ್ಟಿದ ಮೂರು ವಿದ್ರವಗಳು, ಧರ್ಮ, ಅರ್ಥ, ಕಾಮ ಇವುಗಳಿಂದ ಮೂರು ಬಗೆಯ ಶೃಂಗಾರಗಳು ಇರುತ್ತವೆ. ಸಮವಕಾರದಲ್ಲಿ ಬಿಂದು ಪ್ರವೇಶಕಗಳು ಇರುವುದಿಲ್ಲ, ಪ್ರಹಸನದಂತೆಯೇ ಸಮವಕಾರದಲ್ಲಿಯೂ ಆವಶ್ಯಕತೆಗೆ ತಕ್ಕಂತೆ ವೀಥ್ಯಂಗ-ಗಳನ್ನು ಬಳಸಿಕೊಳ್ಳಬಹುದು.

(ಸಮವಕೀರ್ಯಂತೇ ಅರ್ಥಾ ಅಸ್ಮಿನ್ನಿತಿ ಸಮವಕಾರಃ. ವಿಷಯಗಳು ಎಲ್ಲಿ ಚದುರಿಕೊಂಡಿರುತ್ತವೆಯೋ ಅಂತಹ ರೂಪಕ.)

**೬೨ ವೀಥಿಯ ಲಕ್ಷಣ—**

**ವೀಥೀತುಕೈಶಿಕೀವೃತ್ತೌ ಸಂಧ್ಯಂಗಾಂಕೈಸ್ತುಭಾಣವತ್ ॥ ೬೮ ॥**

**ರಸಃಸೂಚ್ಯಸ್ತು ಶೃಂಗಾರಃ ಸ್ಪೃಶೇದಪಿರಸಾಂತರಂ ।**
**ಯುಕ್ತಾ ಪ್ರಸ್ತಾವನಾಖ್ಯಾತೈರಂಗೈರುದ್ಘಾತ್ಯಕಾದಿಭಿಃ ॥ ೬೯ ॥**
**ಏವಂ ವೀಥೀ ವಿಧಾತವ್ಯಾ ದ್ವ್ಯೇಕಪಾತ್ರಪ್ರಯೋಜಿತಾ ।**

ತಾ—ವೀಧಿಯು ಕೈಶಿಕೀವೃತ್ತಿಯಿಂದ ಪ್ರಯೋಜಿತವಾಗಿರುತ್ತದೆ. ಇದರಲ್ಲಿ ಸಂಧಿ, ಸಂಧಿಯ ಅಂಗಗಳು, ಹಾಗೂ ಅಂಕಗಳು ಭಾಣದಂತೆಯೇ ಇರುತ್ತವೆ. ವೀಥಿಯಲ್ಲಿ ಸೂಚಿಸತಕ್ಕ ರಸವು ಶೃಂಗಾರ, ಉಳಿದರಸಗಳನ್ನು ಅಂಗವಾಗಿ ಬಳಸಿಕೊಳ್ಳತಕ್ಕದ್ದು. ವೀಥಿಯು ಪ್ರಸ್ತಾವನಾ ಮತ್ತು ಉದ್ಘಾತ್ಯಕ ಮುಂತಾದ ವೀಥಿಯ ಅಂಗಗಳಿಂದ ಕೂಡಿರತಕ್ಕದ್ದು. ಹೀಗೆ ಒಂದು ಅಥವಾ ಎರಡು ಪಾತ್ರಗಳಿಂದ ವೀಥಿಯನ್ನು ಯೋಜಿಸಬೇಕು. (ವೀಥೀ=ಮಾರ್ಗ ಅಥವಾ ಸಾಲು, ಅಂಗಗಳ ಸಾಲು ಇಲ್ಲಿರುವುದರಿಂದ ಈ ಹೆಸರು.)

**೬೩ ಉತ್ಸೃಷ್ಟಿಕಾಂಕಲಕ್ಷಣ—**

**ಉತ್ಸೃಷ್ಟಿಕಾಂಕೇ ಪ್ರಖ್ಯಾತಂ ವೃತ್ತಂ ಬುದ್ಧ್ಯಾ ಪ್ರಪಂಚಯೇತ್ ॥ ೭೦ ॥**
**ರಸಸ್ತು ಕರುಣಃ ಸ್ಥಾಯೀ ನೇತಾರಃ ಪ್ರಾಕೃತಾ ನರಾಃ ।**
**ಭಾಣವತ್ ಸಂಧಿವೃತ್ತ್ಯಂಗೈರ್ಯುಕ್ತಃ ಸ್ತ್ರೀಪರಿದೇವಿತೈಃ ॥೭೧॥**
**ವಾಚಾ ಯುದ್ಧಂ ವಿಧಾತವ್ಯಂ ತಥಾ ಜಯಪರಾಜಯೌ ।**

ತಾ—ಉತ್ಸೃಷ್ಟಿಕಾಂಕದಲ್ಲಿ ಪ್ರಖ್ಯಾತವಾದ ಇತಿವೃತ್ತವನ್ನು ಕವಿಯು ಬುದ್ಧಿಪೂರ್ವಕವಾಗಿ ವಿಸ್ತರಿಸಬೇಕು. ಅದರಲ್ಲಿ ಸ್ಥಾಯಿಯಾದ ರಸವು ಕರುಣ. ಸಾಮಾನ್ಯಜನರು ನಾಯಕರು, ಸಂಧಿ, ವೃತ್ತಿ, ಭಾಣದಂತೆಯೇ ಇರತಕ್ಕದ್ದು. ಇದು ಸ್ತ್ರೀಯರ ದುಃಖಗಳಿಂದಲೂ ವಾಗ್ಯುದ್ಧದಿಂದಲೂ ಕೂಡಿರಬೇಕು. ಮತ್ತು ವಾಗ್ಯುದ್ಧದಿಂದಲೇ ಜಯಾಪಜಯಗಳನ್ನು ತೋರಿಸಬೇಕು.

(ನಾಟಕಾದಿರೂಪಕಗಳ ವಿಭಾಗಕ್ಕೂ ಅಂಕ ಎಂಬ ಹೆಸರು ಇರುವುದರಿಂದ ಎರಡರಲ್ಲಿಯೂ ಭೇದವನ್ನು ತೋರಿಸುವುದಕ್ಕಾಗಿ, 'ಅಂಕ' ಎಂದು ಕರೆಯದೆ 'ಉತ್ಸೃಷ್ಟಿಕಾಂಕ' ಎಂದು ಕರೆದಿದೆ. ಆದರೂ 'ಅಂಕ' ಎಂಬ ಹೆಸರೂ ಬಳಕೆಯಲ್ಲಿದೆ.)

೬೪ ಈಹಾಮೃಗ—

ಮಿಶ್ರಮೀಹಾಮೃಗೇ ವೃತ್ತಂ ಚತುರಂಕಂ ತ್ರಿಸಂಧಿಮತ್ ||೭೨||
ನರದಿವ್ಯಾವನಿಯಮಾನ್ನಾಯಕಪ್ರತಿನಾಯಕೌ |
ಖ್ಯಾತೌ ಧೀರೋದ್ಧತಾವಂತ್ಯೋಽವಿಪರ್ಯಾಸಾದ
ಯುಕ್ತಕೃತ್ || ೭೩ ||
ದಿವ್ಯಸ್ತ್ರಿಯಮನಿಚ್ಛಂತೀಮಪಹಾರಾದಿನೇಚ್ಛತಃ |
ಶೃಂಗಾರಾಭಾಸಮಪ್ಯಸ್ಯ ಕಿಂಚಿತ್ ಕಿಂಚಿತ್
ಪ್ರದರ್ಶಯೇತ್ || ೭೪ ||
ಸಂರಂಭಂ ಪರಮಾನೀಯ ಯುದ್ಧಂ ವ್ಯಾಜಾನ್ನಿವಾರಯೇತ್ |
ವಧಪ್ರಾಪ್ತಸ್ಯ ಕುರ್ವೀತ ವಧಂ ನೈವ ಮಹಾತ್ಮನಃ || ೭೫ ||

**ತಾ**—ಈಹಾಮೃಗದಲ್ಲಿ ಇತ್ತಿವೃತ್ತವು ಮಿಶ್ರವಾಗಿರುತ್ತದೆ. ಅದರಲ್ಲಿ ನಾಲ್ಕು ಅಂಕಗಳು ಮತ್ತು ಮೂರು ಸಂಧಿಗಳು. ಮನುಷ್ಯ ಮತ್ತು ದೇವತೆಯು ಅನಿಯಮದಿಂದ ನಾಯಕ ಪ್ರತಿನಾಯಕರಾಗಿರುತ್ತಾರೆ. (ಇಬ್ಬರಲ್ಲಿ ಯಾರಾದರೂ ನಾಯಕಪ್ರತಿನಾಯಕರಾಗಬಹುದು.) ಇವರಿಬ್ಬರೂ ಖ್ಯಾತರೂ ಧೀರೋದ್ಧತರೂ ಆಗಿರಬೇಕು. ಅವರಲ್ಲಿ ಪ್ರತಿನಾಯಕನು ಭ್ರಾಂತಿಯಿಂದ ಯುಕ್ತವಲ್ಲದ್ದನ್ನು ಮಾಡುತ್ತಾನೆ. ಇಚ್ಛೆಯಿಲ್ಲದ ದಿವ್ಯಸ್ತ್ರೀಯೊಬ್ಬಳನ್ನು ಅಪಹರಿಸಿಕೊಂಡು ಹೋಗಲು ಮಾಡುವ ಪ್ರಯತ್ನದಲ್ಲಿ ಬರುವ ಶೃಂಗಾರಾಭಾಸವನ್ನು ಇಲ್ಲಿ ಅಲ್ಪ ಸ್ವಲ್ಪ ತೋರಿಸತಕ್ಕದ್ದು. ವೈರ, ಕ್ರೋಧಗಳನ್ನು ಹೆಚ್ಚಾಗಿ ತೋರಿದ್ದರೂ, ಅಂತ್ಯದಲ್ಲಿ ಯಾವುದಾದರೊಂದು ನೆಪದಿಂದ ಯುದ್ಧವನ್ನು ನಿವಾರಿಸತಕ್ಕದ್ದು. ವಧೆಯಾಗುವಂತಿದ್ದರೂ ಮಹಾತ್ಮನಾದ ನಾಯಕನ ವಧೆಯನ್ನು ಈಹಾಮೃಗದಲ್ಲಿ ಯೋಜಿಸಬಾರದು.

(ಮೃಗ ಅಂದರೆ ಜಿಂಕೆಯಂತೆ ಅಲಭ್ಯಳಾದ ನಾಯಿಕೆಗಾಗಿ ಇಲ್ಲಿ ಅಭಿಲಾಷೆಯು ವರ್ಣಿತವಾಗುವುದರಿಂದ ಇದಕ್ಕೆ 'ಈಹಾಮೃಗ' ಎಂದು ಹೆಸರು. ಖ್ಯಾತ ಅಥವಾ ಅಖ್ಯಾತವಾದ ಯಾವ ವೃತ್ತವಾದರೂ ಆಗಬಹುದು. ಪ್ರತಿನಾಯಕನು ಕೇವಲ ಭ್ರಾಂತಿಯಿಂದ ಕೆಡುಕು ಮಾಡುತ್ತಾನೆ.)

೭೫ **ಉಪಸಂಹಾರ—**

> **ಇತ್ಥಂ ವಿಚಿಂತ್ಯ ದಶರೂಪಕಲಕ್ಷ್ಮಮಾರ್ಗಂ**
> **ಆಲೋಕ್ಯ ವಸ್ತು ಪರಿಭಾವ್ಯಕಥಾಪ್ರಬಂಧಾನ್ ।**
> **ಕುರ್ಯಾದಯತ್ನವದಲಂಕೃತಿಭಿಃ ಪ್ರಬಂಧಂ**
> **ವಾಕ್ಯೈರುದಾರಮಧುರೈಃ ಸ್ಫುಟಮಂದವೃತ್ತೈಃ ॥ ೭೬ ॥**

**ತಾ**—ಹೀಗೆ ದಶರೂಪಕದಲಕ್ಷಣ ಮಾರ್ಗಗಳನ್ನು ಚೆನ್ನಾಗಿ ಪರಿಶೀಲಿಸಿ, ಆರಿಸಿಕೊಳ್ಳುವ ವಸ್ತುವನ್ನೂ ಮತ್ತು ಪ್ರಸಿದ್ಧರಾದ ಹಿಂದಿನ ಕವಿಗಳ ಪ್ರಬಂಧ-ಗಳನ್ನೂ ಗಮನಿಸಿ, ಪ್ರಯತ್ನವಿಲ್ಲದೆ ಬಂದ ಆಲಂಕಾರಗಳಿಂದಲೂ, ಉದಾರವೂ ಮಧುರವೂ ಆದ ಮಾತುಗಳಿಂದಲೂ, ಸ್ಪಷ್ಟವೂ ಸಾವಧಾನವೂ ಆದ ಛಂದಸ್ಸುಗಳಿಂದಲೂ, ರೂಪಕಗಳನ್ನು ರಚಿಸತಕ್ಕದ್ದು.

ಇಲ್ಲಿಗೆ ದಶರೂಪಕದಲ್ಲಿ
ಮೂರನೆಯ ಪ್ರಕಾಶವು ಮುಗಿಯಿತು.

---

## ಪರಿಶಿಷ್ಟ ೧

# ದಶರೂಪಕಸಾರ

(೨, ೪ ಪ್ರಕಾಶಗಳು)

ಜನರಿಗೆ ಸನ್ಮಾರ್ಗದಲ್ಲಿ ಪ್ರವೃತ್ತಿಯನ್ನುಂಟುಮಾಡಿ ಇಹದಲ್ಲಿಯೂ ಪರದಲ್ಲಿಯೂ ನಿರತಿಶಯವಾದ ಆನಂದವನ್ನುಂಟು ಮಾಡಲು ವೇದ, ಪುರಾಣ–ಶಾಸ್ತ್ರ,ಕಾವ್ಯಗಳು ಪ್ರವೃತ್ತವಾಗಿವೆ. ಆದರೆ ವೇದೋಪದೇಶವು ಪ್ರಭುವಿನ ಆಜ್ಞೆಯಂತೆ ಇರುತ್ತದೆ. 'ಇದನ್ನು ಮಾಡು, ಮಾಡದಿದ್ದರೆ ಇಂತಹ ತೊಂದರೆಯಾಗುತ್ತದೆ.' ಎಂದು ವೇದವು ವಿಧಿನಿಷೇಧಗಳನ್ನು ಶಬ್ದಪ್ರಧಾನವಾಗಿ ರಾಜಾಜ್ಞೆಯಂತೆ ತಿಳಿಸುತ್ತದೆ. ಜನರಿಗೆ ಭಯದಿಂದ ಅದರ ಉಪದೇಶದಲ್ಲಿ ಪ್ರವೃತ್ತಿ ಹುಟ್ಟಲು ಸಾಧ್ಯ. ಪುರಾಣಾದಿಗಳು ಮಿತ್ರನಂತೆ 'ಇದನ್ನು ಮಾಡು, ಈ ಕೆಲಸ ಮಾಡಿದವರಿಗೆ ಇಂತಹ ಫಲವುಂಟಾಗಿದೆ. ಹೀಗೆ ಮಾಡದವರಿಗೆ ಇಂತಹ ತೊಂದರೆಯಾಯಿತು' ಎಂದು ಆಖ್ಯಾನ, ಉಪಾಖ್ಯಾನಗಳ ಮೂಲಕ ಅರ್ಥಪ್ರಧಾನವಾಗಿ ಬೋಧಿಸಿ ಜನರನ್ನು ಸನ್ಮಾರ್ಗದಲ್ಲಿ ನಡೆಯುವಂತೆ ಮಾಡುತ್ತವೆ. ಕಾವ್ಯಲಕ್ಷ್ಮಿಯಾದರೋ ಸುಂದರಿಯಾದ ಪ್ರಿಯಳಾದ ಕಾಂತೆಯಂತೆ. ಅವಳು ಶಬ್ದ ಮತ್ತು ವಾಚ್ಯಾರ್ಥಗಳಿಗಿಂತಲೂ, ಬೇರೆಯಾದ ಧ್ವನಿಯ ಮೂಲಕ ರಸಾಸ್ವಾದವನ್ನುಂಟು ಮಾಡಿ ಜನರನ್ನು ಆಕರ್ಷಿಸಿ ಆನಂದವನ್ನುಂಟು ಮಾಡಿ ಸನ್ಮಾರ್ಗದಲ್ಲಿ ನಡೆಯುವಂತೆ ಪ್ರೇರಿಸುತ್ತಾಳೆ.

> ಯದ್ವೇದಾತ್ ಪ್ರಭುಸಮ್ಮಿತಾದಧಿಗತಂ ಶಬ್ದಪ್ರಧಾನಾಚ್ಚಿರಂ
> ಯಚ್ಚಾರ್ಥಪ್ರವಣಾತ್ ಪುರಾಣವಚನಾದಿಷ್ಟಂ ಸುಹೃತ್ಸಂಮಿತಾತ್ ।
> ಕಾಂತಾಸಂಮಿತಯಾ ಯಯಾ ಸರಸತಾಮಾಪಾದ್ಯ ಕಾವ್ಯಶ್ರಿಯಾ
> ಕರ್ತವ್ಯೇ ಕುತುಕೀ ಬುಧೋ ವಿರಚಿತಸ್ತಸ್ಯೈಸ್ಪೃಹಾಂಕುರ್ಮಹೇ ॥

ವಿದ್ಯಾನಾಥ ವಿರಚಿತವಾದ ಪ್ರತಾಪರುದ್ರೀಯದ ಈ ಶ್ಲೋಕವು ಮೇಲಿನ ಅರ್ಥವನ್ನು ವಿಶದಗೊಳಿಸುತ್ತದೆ.

'ದೋಷವಿಲ್ಲದ, ಗುಣಾಲಂಕಾರ ಸಹಿತವಾದ ಶಬ್ದಾರ್ಥಗಳು ಕಾವ್ಯ' ವೆಂದು ಕಾವ್ಯಪ್ರಕಾಶಕಾರರಾದ ಮಮ್ಮಟರಮತ. ಪಂಡಿತರಾಜ ಜಗನ್ನಾಥನು ರಸಗಂಗಾಧರ ಗ್ರಂಥದಲ್ಲಿ–'ರಮಣೀಯಾರ್ಥಪ್ರತಿಪಾದಕಶಬ್ದ'ವೇ ಕಾವ್ಯ ವೆಂದಿರುತ್ತಾನೆ. ಕಾವ್ಯವು ಶ್ರವ್ಯ, ದೃಶ್ಯ ಎಂದು ಎರಡು ವಿಧ. ಕಿವಿಯಿಂದ ಕೇಳಿದಾಗ ಆನಂದವನ್ನುಂಟು ಮಾಡುವುದು ಶ್ರವ್ಯಕಾವ್ಯ. ಶ್ರವ್ಯಕಾವ್ಯವು ಪದ್ಯ, ಗದ್ಯ, ಉಭಯರೂಪವೆಂದು ಮೂರು ವಿಧವಾಗಿದೆ. ರಘುವಂಶಾದಿಗಳು ಪದ್ಯಕಾವ್ಯಗಳು. ಕಾದಂಬರೀ ಹರ್ಷಚರಿತ ಮುಂತಾದುವು ಗದ್ಯಕಾವ್ಯಗಳು. ಗದ್ಯಪದ್ಯಮಯವಾದ ಕಾವ್ಯವು ಚಂಪೂ ಕಾವ್ಯವು. ಚಂಪೂರಾಮಾಯಣ ಮುಂತಾದುವು. ಇಂತಹ ಕಾವ್ಯಗಳಲ್ಲಿ ಲೋಕೋತ್ತರಗುಣಶಾಲಿಯಾದ ನಾಯಕನನ್ನು ವರ್ಣಿಸಬೇಕು. ನಾಟಕಾದಿರೂಪಕಗಳೇ ದೃಶ್ಯಕಾವ್ಯವಾಗಿ ರುತ್ತವೆ.

ಧೀರೋದಾತ್ತ, ಧೀರೋದ್ಧತ, ಧೀರಲಲಿತ ಮತ್ತು ಧೀರಶಾಂತ ಎಂದು ನಾಯಕರು ನಾಲ್ಕು ವಿಧ. ರಾಮಾದಿಗಳು ಧೀರೋದಾತ್ತ ನಾಯಕರು. ಅಶ್ವತ್ಥಾಮ, ದುರ್ಯೋಧನ, ಇಂದ್ರಜಿತ್ ಮುಂತಾದವರು ಧೀರೋದ್ಧತರು. ವತ್ಸರಾಜ ಮುಂತಾದವರು ಧೀರಲಲಿತರು. ಮಾಧವ, ಚಾರುದತ್ತ ಮುಂತಾದವರು ಧೀರಶಾಂತರು. ಶೃಂಗಾರರಸಾನುಗುಣವಾಗಿ, ಅನುಕೂಲ, ದಕ್ಷಿಣ, ಧೃಷ್ಟ, ಶಠ ಎಂದು ನಾಯಕರು ನಾಲ್ಕು ವಿಧವಾಗಿರುತ್ತಾರೆ. ಈ ನಾಯಕರಿಗೆ ಪೀಠಮರ್ದ, ವಿಟ,ಚೇಟ, ವಿದೂಷಕರು ಸಹಾಯಕರು. ನಾಯಕನಿಗಿಂತ ಸ್ವಲ್ಪ ಕಡಿಮೆಯಾದವನು ಪೀಠಮರ್ದ. ರಾಮನಿಗೆ ಸುಗ್ರೀವನು ಪೀಠಮರ್ದನಾಗಿರುತ್ತಾನೆ. ಸ್ವಸ್ತ್ರೀ, ಪರಸ್ತ್ರೀ, ಸಾಧಾರಣಸ್ತ್ರೀ ಎಂದು ನಾಯಿಕೆಯು ಮೂರು ವಿಧ. ಅದರಲ್ಲಿ ಸ್ವಸ್ತ್ರೀ (ಸ್ವೀಯಾ) ನಾಯಿಕೆಯು ಮುಗ್ಧಾ, ಮಧ್ಯಾ, ಪ್ರೌಢಾ ಎಂಬುದಾಗಿ ಮೂರು ವಿಧ. ಕನ್ಯಾ ಅಥವಾ ವಿವಾಹಿತಳಾದವಳು ಪರಸ್ತ್ರೀ. ವಿವಾಹಿತಳಾದ ಪರಸ್ತ್ರೀ ವಿಷಯಕ ಶೃಂಗಾರ ರಸವನ್ನು ಪ್ರಧಾನರಸದಲ್ಲಿ ವರ್ಣಿಸಬಾರದು. ವೇಶ್ಯೆಯು ಸಾಧಾರಣ ಸ್ತ್ರೀ ಯಾಗಿರುತ್ತಾಳೆ. ಸ್ವಾಧೀನ ಪತಿಕಾ, ವಾಸಕಸಜ್ಜಾ, ವಿರಹೋತ್ಕಂಠಿತಾ, ಖಂಡಿತಾ, ಕಲಹಾಂತರಿತಾ, ವಿಪ್ರಲಬ್ಧಾ, ಪ್ರೋಷಿತ ಭರ್ತೃಕಾ, ಅಭಿಸಾರಿಕಾ ಎಂಬುದಾಗಿ ಶೃಂಗಾರ ನಾಯಿಕೆಯರು ಎಂಟು ವಿಧವಾಗಿರುತ್ತಾರೆ. ಪತಿಯು

ಸಮೀಪದಲ್ಲಿ, ಸ್ವಾಧೀನವಾಗಿ ಇರುವವಳು ಸ್ವಾಧೀನ ಭರ್ತೃಕೆಯು. ಪ್ರಿಯನು ಬರುವನೆಂದು ಅಲಂಕರಿಸಿಕೊಳ್ಳುತ್ತಿರುವವಳು ವಾಸಕ ಸಜ್ಜಿಕೆ, ಅಪರಾಧಿಯಲ್ಲದಿದ್ದರೂ ಪ್ರಿಯನು ತಡಮಾಡುತ್ತಿದ್ದರೆ ಉತ್ಕಂಠಿತಳಾದವಳು ವಿರಹೋತ್ಕಂಠಿತೆಯು, ಪತಿಯು ಇತರ ನಾಯಿಕೆಯ ಸಹವಾಸ ಮಾಡಿದ್ದಾನೆಂದು ತಿಳಿದು ಅಸೂಯೆಯಿಂದ ಕೂಡಿದವಳು ಖಂಡಿತೆ. ನಾಯಕನು ಅಪರಾಧ ಮಾಡಿದಾಗ ಕೋಪದಿಂದ ಅವನನ್ನು ತಿರಸ್ಕರಿಸಿ, ಅನಂತರ ಪಶ್ಚಾತ್ತಾಪ ಪಡುವವಳು ಕಲಹಾಂತರಿತಾ, ತಿಳಿಸಿದ ಸಮಯದಲ್ಲಿ ಪತಿಯು ಬಾರದಿದ್ದಾಗ ಅವಮಾನಿತಳಾದವಳು ವಿಪ್ರಲಬ್ಧೆಯು, ಪ್ರಿಯನು ಕಾರ್ಯಾಂತರದಿಂದ ದೂರ ದೇಶದಲ್ಲಿದ್ದಾಗ ವಿರಹಿಣಿಯಾದ ನಾಯಿಕೆಯು ಪ್ರೋಷಿತ ಭರ್ತೃಕೆ, ಪ್ರಿಯನ ಬಳಿಗೆ ದೂತಿಯನ್ನು ಕಳುಹಿಸುವವಳು ಅಥವಾ ತಾನೇ ಪ್ರಿಯನ ಬಳಿಗೆ ಹೋಗುವವಳು ಅಭಿಸಾರಿಕೆ, ದೂತಿ, ದಾಸಿ, ಸಖೀ, ಅಗಸಗಿತ್ತಿ, ದಾದಿಯ ಮಗಳು ಮುಂತಾದವರು ಸಹಾಯಕರು.

ಕವಿಯು ಔಚಿತ್ಯವನ್ನರಿತು ಇಂತಹ ನಾಯಕ, ನಾಯಿಕೆ, ಮುಂತಾದವರನ್ನು ಆರಿಸಿ ಉತ್ತಮವರ್ಣನೆಗಳ ಮೂಲಕವಾಗಿ ಕಥೆಯನ್ನು ಮುಂದುವರಿಸಬೇಕು. ಇಂತಹ ಕಾವ್ಯವು ವ್ಯಂಗ್ಯಾರ್ಥ ಪ್ರಧಾನವಾಗಿದ್ದರೆ ಆ ಕಾವ್ಯವು ಉತ್ತಮ (ಧ್ವನಿಕಾವ್ಯ)ವೆಂದೂ, ವ್ಯಂಗ್ಯಾರ್ಥವು ಅಪ್ರಧಾನವಾಗಿದ್ದರೆ ಅದು ಮಧ್ಯಮಕಾವ್ಯ (ಗುಣೀ ಭೂತ ವ್ಯಂಗ್ಯ)ವೆಂದೂ, ವ್ಯಂಗ್ಯಾರ್ಥವು ಅತ್ಯಂತ ಅಪ್ರಧಾನವಾಗಿದ್ದು ಶಬ್ದಾರ್ಥ ಚಮತ್ಕಾರವೇ ಹೆಚ್ಚಾಗಿದ್ದರೆ ಅಧಮಕಾವ್ಯ (ಚಿತ್ರ)ವೆಂದೂ ಹೇಳುತ್ತಾರೆ. ಕಾವ್ಯವನ್ನು ಸಾಮಾನ್ಯವಾಗಿ ಮಹಾಕಾವ್ಯ ಮತ್ತು ಖಂಡಕಾವ್ಯವೆಂದು ಎರಡು ವಿಧವಾಗಿ ವಿಂಗಡಿಸುತ್ತಾರೆ. ನಗರ[1], ಸಮುದ್ರ[2], ಪರ್ವತ[3], ಋತು[4], ಚಂದ್ರ[5], ಸೂರ್ಯ[6], ಉದ್ಯಾನಕ್ರೀಡೆ[7], ಜಲಕ್ರೀಡೆ[8], ಮಧುಪಾನ[9], ರತೋತ್ಸವ[10], ವಿರಹ[11], ವಿವಾಹ[12], ಪುತ್ರೋತ್ಪತ್ತಿ[13], ಮಂತ್ರಾಲೋಚನೆ[14], ದ್ಯೂತ[15], ಪ್ರಯಾಣ[16], ಯುದ್ಧ[17], ನಾಯಕನ ಅಭ್ಯುದಯ[18] ಈ 18ನ್ನು ವರ್ಣಿಸಿದ್ದರೆ ಅದು ಮಹಾಕಾವ್ಯವಾಗುತ್ತದೆ. ಉದಾ—ರಘುವಂಶಾದಿಗಳು. ಕೆಲವರು ಈ ಹದಿನೆಂಟರಲ್ಲಿ ಕೆಲವನ್ನು ಬಿಟ್ಟರೂ ನ್ಯೂನತೆಯಿಲ್ಲವೆನ್ನುತ್ತಾರೆ. ಮೇಘ

ಸಂದೇಶ ಮುಂತಾದುವುಗಳು ಖಂಡಕಾವ್ಯಗಳು. ರಸಪ್ರಧಾನವಾಗಿದ್ದು ಅಭಿನಯಯೋಗ್ಯವಾಗಿದ್ದರೆ ಅದು ನಾಟಕವೆನಿಸುತ್ತದೆ.

ವಿಭಾವ, ಅನುಭಾವ, ಸಾತ್ತ್ವಿಕ ಭಾವ, ವ್ಯಭಿಚಾರಿ ಭಾವಗಳ ಮೂಲಕ ಅನುಭವಕ್ಕೆ ಯೋಗ್ಯವಾಗಿ ಮಾಡಲ್ಪಡುವ ಸ್ಥಾಯಿಭಾವವೇ 'ರಸ' ಎಂದು ಹೇಳಲ್ಪಡುತ್ತದೆ. ಸಾಮಾಜಿಕರ ಹೃದಯದಲ್ಲಿರುವ ರಸದ ಪೂರ್ವಾವಸ್ಥೆಯನ್ನೇ ಸ್ಥಾಯಿಭಾವವೆಂದು ಹೇಳುತ್ತಾರೆ. ಅಕ್ಕಿ ಮತ್ತು ಅನ್ನಗಳಿಗಿರುವ ವ್ಯತ್ಯಾಸವನ್ನೇ ಸ್ಥಾಯಿಭಾವ ಮತ್ತು ರಸಗಳಿಗೆ ಹೇಳಬಹುದು. ವಿಭಾವವು ಆಲಂಬನವಿಭಾವ ಮತ್ತು ಉದ್ದೀಪನವಿಭಾವವೆಂದು ಎರಡು ವಿಧವಾಗಿದೆ. ನಾಯಕ ನಾಯಿಕಾ ಮುಂತಾದವರು ಆಲಂಬನ ವಿಭಾವ, ಚಂದ್ರೋದಯ ಮುಂತಾದ್ದು ಉದ್ದೀಪನ ವಿಭಾವ ; ಹೃದಯದ ಭಾವವನ್ನು, ಹುಬ್ಬಿನ ಕುಣಿತ, ಕಡೆಗಣ್ಣಿನ ನೋಟ ಮುಂತಾದುವುಗಳಿಂದ ತಿಳಿಸುವುದೇ ಅನುಭಾವ, ಸ್ಥಾಯಿಭಾವಗಳ ಸುತ್ತಲೂ ಉಂಟಾಗುವ ನಿರ್ವೇದ (ಒಂದು ರೀತಿಯ ಉದಾಸೀನತೆ) ಮುಂತಾದುವುಗಳು 33 ವ್ಯಭಿಚಾರಿಭಾವಗಳೆಂದೂ ಹೇಳಲ್ಪಡುತ್ತವೆ. ಸಮುದ್ರದ ನೀರು ಒಂದೇ ರೀತಿ ಇದ್ದರೂ ಅಲ್ಲಿ ಏಳುವ ಅಲೆಗಳಂತೆ ಇವು ಇರುತ್ತವೆ. ವಸ್ತ್ರದ ಪೂರ್ವಾವಸ್ಥೆಯಾದ ದಾರಗಳ ಸನ್ನಿವೇಶದಂತೆ ಇರುವ ಸ್ಥಾಯಿಭಾವವು ಮೇಲೆ ಹೇಳಿದ ಆಲಂಬನ, ಉದ್ದೀಪನವಿಭಾವಾದಿಗಳಿಂದ ಪರಿಪೋಷಗೊಂಡು ರಸಭಾವ'ವನ್ನು ಹೊಂದುತ್ತದೆ. ಈರಸಾನುಭವವು 'ಬ್ರಹ್ಮಾನಂದಸಮಾನ'ವಾಗಿರುತ್ತದೆ. ಪಾನಕದಲ್ಲಿ ಅನೇಕ ವಸ್ತುಗಳು ಸೇರಿದ್ದರೂ ಅವು ಪ್ರತ್ಯೇಕವಾಗಿ ತೋರದೆ ಒಂದು ವಿಲಕ್ಷಣವಾದ ರುಚಿಯನ್ನು ಕೊಡುವಂತೆ ರಸವೂ ಒಂದು ರೀತಿಯ ವಿಶಿಷ್ಟವಾದ ಅಖಂಡಾನಂದಾನುಭವ ರೂಪವಾಗಿರುತ್ತದೆ.

ಶೃಂಗಾರ, ಹಾಸ್ಯ, ಕರುಣ, ರೌದ್ರ, ವೀರ, ಭಯಾನಕ, ಬೀಭತ್ಸ, ಅದ್ಭುತ, ಶಾಂತ ಎಂದು ರಸಗಳು ಒಂಭತ್ತು. ರತಿ, ಹಾಸ, ಶೋಕ, ಕ್ರೋಧ, ಉತ್ಸಾಹ, ಭಯ, ಜುಗುಪ್ಸಾ, ವಿಸ್ಮಯ, ಶಮ ಈ ಒಂಭತ್ತು ಮೇಲೆ ಹೇಳಿದ ಒಂಭತ್ತು ರಸಗಳ ಸ್ಥಾಯಿಭಾವಗಳು. ಅಯೋಗ, ವಿಪ್ರಯೋಗ, ಸಂಭೋಗ–ವೆಂದು ಶೃಂಗಾರ ರಸವು ಮೂರು ವಿಧ. ಏಕಚಿತ್ತರಾದ ನಾಯಕ ನಾಯಿಕೆ

ಯರು ಸೇರದೇ ಇರುವುದು ಅಯೋಗ, ಒಂದು ಬಾರಿ ಸಮಾಗಮವಾಗಿ ಅವರು ಬೇರೆಯಾದರೆ ವಿಪ್ರಯೋಗ, ನಾಯಕ ನಾಯಿಕೆಯರು ಪರಸ್ಪರ ಸೇರಿದ್ದಾಗ ಉಂಟಾಗುವ ದರ್ಶನ ಆಲಿಂಗನ ಮುಂತಾದುದು ಸಂಭೋಗ ಶೃಂಗಾರ ಎನ್ನಿಸಿ ಕೊಳ್ಳುತ್ತದೆ. ಈ ದರ್ಶನಾದಿಗಳಲ್ಲಿರುವ ಇಚ್ಛಾ ವಿಶೇಷವೇ ರತಿಯು. ವಿಕೃತ ವಾದ ಅಂಗ, ಮಾತು, ವೇಷಗಳಿಂದ ಉಂಟಾಗುವ ಮನೋವಿಕಾರವೇ ಹಾಸ. ಇದು ಹಾಸ್ಯರಸಕ್ಕೆ ಸ್ಥಾಯಿಭಾವ. ಇಷ್ಟಜನರ ವಿಯೋಗಾದಿಗಳಿಂದ ಉಂಟಾದ ದುಃಖಾನುಭವವೇ ಶೋಕವು. ಇದು ಕರುಣರಸದ ಸ್ಥಾಯಿಭಾವ. ಶತ್ರುವಿನ ಅಪರಾಧದಿಂದ ಉಂಟಾದ ಮನಸ್ಸಿನ ಪ್ರಜ್ವಲನಾವಸ್ಥೆಯೇ ಕ್ರೋಧ. ಇದು ರೌದ್ರರಸಕ್ಕೆ ಸ್ಥಾಯಿಭಾವ, ಅಸಾಧಾರಣವಾದ ಕಾರ್ಯಗಳಲ್ಲಿ ಸ್ಥಿರ ವಾದ ಪ್ರಯತ್ನದ ಅವಸ್ಥೆಯೇ ಉತ್ಸಾಹ, ಇದು ವೀರರಸಕ್ಕೆ ಸ್ಥಾಯಿಭಾವ, ಭಯಂಕರವಾದ ವಸ್ತುವಿನ ದರ್ಶನ ಶ್ರವಣಾದಿಗಳಿಂದ ಉಂಟಾದ ಅನಿಷ್ಟಾ-ಶಂಕೆಗೆ ಭಯವೆಂದು ಹೆಸರು, ಇದು ಭಯಾನಕರಸಕ್ಕೆ ಸ್ಥಾಯಿಭಾವ. ರಕ್ತ, ವಾಂತಿ ಮುಂತಾದ ಪದಾರ್ಥಗಳ ದರ್ಶನ ಶ್ರವಣಾದಿಗಳಿಂದ ಉಂಟಾಗುವ ಮನಃ ಸಂಕೋಚಕ್ಕೆ ಜುಗುಪ್ಸೆ ಎಂದು ಹೆಸರು. ಇದು ಬೀಭತ್ಸರಸದ ಸ್ಥಾಯಿ-ಭಾವ. ಅಪೂರ್ವವಾದ ವಸ್ತುವನ್ನು ನೋಡುವುದರಿಂದ ಉಂಟಾಗುವ ಚಿತ್ತ ವಿಸ್ತಾರಕ್ಕೆ ವಿಸ್ಮಯವೆಂದು ಹೆಸರು. ಇದು ಅದ್ಭುತರಸದ ಸ್ಥಾಯಿಭಾವ. ವೈರಾಗ್ಯಾದಿಗಳಿಂದ ಉಂಟಾಗುವ ನಿರ್ವಿಕಾರಮನೋಭಾವಕ್ಕೆ ನಿರ್ವೇದ ವೆಂದು ಹೆಸರು. ಇದು ಶಾಂತರಸದ ಸ್ಥಾಯಿಭಾವ ಕಾವ್ಯಾರ್ಥವನ್ನು ನಿಪುಣ ನಾದ ನಟನು ಕುಶಲತೆಯಿಂದ ಅಭಿನಯಿಸುವಾಗ ಸಾಮಾಜಿಕರಿಗೆ ಅಲೌಕಿಕ ವಾದ ರಸಾನುಭವವು ಉಂಟಾಗುತ್ತದೆ.

ಹೀಗೆ ಕಾವ್ಯ ನಾಟಕಗಳೆರಡೂ ರಸಪ್ರಧಾನವಾಗಿರಬೇಕು. ಅದರಲ್ಲಿಯೂ ನಾಟಕವು ನಿಪುಣನಾದ ಕವಿಯ ಕೌಶಲದಿಂದ ಉಚಿತವಾದ ಸನ್ನಿವೇಶಗಳಿಂದ ರಚಿತವಾಗಿರಬೇಕು. ಅಂತಹ ನಾಟಕವು ಸಹೃದಯರಿಗೆ ರಸಾನುಭವದ ಪರಾಕಾಷ್ಠೆಯನ್ನು ಉಂಟು ಮಾಡುತ್ತದೆ ಈ ಅಭಿಪ್ರಾಯದಿಂದಲೇ, 'ಕಾವ್ಯೇಷುನಾಟಕಂ ರಮ್ಯಂ'. ನಾಟಕಾಂತಂ ಸಾಹಿತ್ಯಂ' ಮುಂತಾದ ಮಾತುಗಳನ್ನು ಸಹೃದಯರಾದ ಹಿರಿಯರು ಆಡಿರುತ್ತಾರೆ.

## ಪರಿಶಿಷ್ಟ ೨

೧ ಸುಮಾರು ಕ್ರಿ.ಶ. 450ರಲ್ಲಿ ವಿಶಾಖದತ್ತನು ಮುದ್ರಾರಾಕ್ಷಸ ಎಂಬ ನಾಟಕವನ್ನು ರಚಿಸಿದನು. ಇದರಲ್ಲಿ ಧೀರೋದಾತ್ತನಾದ ಚಾಣಕ್ಯನೇ ನಾಯಕನು. ಪ್ರಖ್ಯಾತ ಇತಿವೃತ್ತ, ವೀರರಸ ಪ್ರಧಾನ. ಸುಮಾರು ಕ್ರಿ.ಶ. 400ರಲ್ಲಿದ್ದ ಕಾಳಿದಾಸನು ರಚಿಸಿದ ಅಭಿಜ್ಞಾನಶಾಕುಂತಲ, ಮಾಲವಿಕಾಗ್ನಿಮಿತ್ರ ಎಂಬ ಎರಡು ನಾಟಕಗಳೂ ಪ್ರಸಿದ್ಧವಾಗಿವೆ. ಶಾಕುಂತಲದಲ್ಲಿ ಮಿಶ್ರ ಇತಿವೃತ್ತ. ಧೀರೋದಾತ್ತನಾದ ದುಷ್ಯಂತನೇ ನಾಯಕ. ಮುಗ್ಧೆಯಾದ ಶಕುಂತಲೆ ನಾಯಿಕೆ. ಶೃಂಗಾರರಸ ಪ್ರಧಾನ. ಕಾಳಿದಾಸನ ಮತ್ತೊಂದು ನಾಟಕ ವಿಕ್ರಮೋರ್ವಶೀಯದಲ್ಲಿ ಪ್ರಖ್ಯಾತ ಇತಿವೃತ್ತ, ಶೃಂಗಾರರಸ ಪ್ರಧಾನ, ಪ್ರೌಢೆಯಾದ ಊರ್ವಶಿ ನಾಯಿಕೆ, ಧೀರಲಲಿತನಾದ ಪುರೂರವನಾಯಕ. ಮಾಲವಿಕಾಗ್ನಿಮಿತ್ರದಲ್ಲಿ ಧೀರಲಲಿತನಾದ ಅಗ್ನಿಮಿತ್ರನು ನಾಯಕ. ಮುಗ್ಧೆಯಾದ ಮಾಲವಿಕೆಯು ನಾಯಿಕೆ. ಪ್ರಖ್ಯಾತ ಇತಿವೃತ್ತ. ಶೃಂಗಾರ ಪ್ರಧಾನರಸ. ಸುಮಾರು ಕ್ರಿ.ಶ. 700ರಲ್ಲಿದ್ದ ಭವಭೂತಿಯು ಉತ್ತರರಾಮಚರಿತವೆಂಬ ಕರುಣರಸಪ್ರಧಾನ ನಾಟಕವನ್ನು ಬರೆದಿದ್ದಾನೆ. ಇದರಲ್ಲಿ ಧೀರೋದಾತ್ತನಾದ ರಾಮನೇ ನಾಯಕನು. ಮುಗ್ಧೆಯಾದ ಸೀತೆಯೇ ನಾಯಿಕೆ. ಪ್ರಖ್ಯಾತ ಇತಿವೃತ್ತ.

೨ ಭರತನ ನಾಟ್ಯಶಾಸ್ತ್ರದ ಕಾಲದಿಂದ ಇತ್ತೀಚಿನವರೆಗೆ ಬಂದಿರುವ ನಾಟಕಾಂಗಗಳ ವಿಶ್ಲೇಷಣೆಯನ್ನು ಗಮನಿಸಿದರೆ ಕೆಲವು ವಿವರಗಳಲ್ಲಿ ಹೊರತು ಪ್ರಧಾನವಾದ ವಿಷಯಗಳಲ್ಲಿ ಮತಭೇದಗಳು ಕಂಡುಬರುವುದಿಲ್ಲ. ಇದರಿಂದ ಭರತನು ಕೊಟ್ಟ ವಿಶ್ಲೇಷಣೆಯು ಸುಮಾರು 1500 ವರ್ಷಗಳ ಕಾಲದ ಭಾರತೀಯ ನಾಟಕವಿಮರ್ಶಕರ ಮನಸ್ಸನ್ನು ಮೆಚ್ಚಿಸುವಷ್ಟು ಉತ್ತಮವಾಗಿದ್ದಾಗಿತ್ತೆಂದು ತಿಳಿಯುತ್ತದೆ. ನಾಟಕಾಂಗಗಳ ಬಳಕೆಯ ಬಗ್ಗೆ ಆನಂದವರ್ಧನನ ಈ ಕೆಳಕಂಡ ಅಭಿಪ್ರಾಯವು ಎಲ್ಲಾ ನಾಟಕವಿಮರ್ಶಕರಿಂದಲೂ ಒಮ್ಮತದಿಂದ ಎತ್ತಿಹಿಡಿಯಲ್ಪಟ್ಟಿದೆ. ಸಂಧಿಸಂಧ್ಯಂಗಘಟನಂ ರಸಾಭಿವ್ಯಕ್ತ್ಯಪೇಕ್ಷಯಾ । ನತುಕೇವಲಯಾ ಶಾಸ್ತ್ರಸ್ಥಿತಿಸಂಪಾದನೇಚ್ಛಯಾ (ಧ್ವನ್ಯಾಲೋಕ................)

೩ ನಾಟಕಾಂಗಗಳ ಪ್ರಯೋಜನವನ್ನು ದಶರೂಪಕ (1–55) ದ
ಹೇಳಿದೆ. ಇದರ ಜೊತೆಗೆ ರೂಪಕದ ಪರಮಉದ್ದೇಶ, ರೂಪಕದ ವಸ
ಇವುಗಳ ಬಗ್ಗೆ ದಶಕರೂಪಕದಲ್ಲಿ ಹೇಳಿರುವುದನ್ನು ಗಮನಿಸಿದರೆ ನಾಟಕಾಂಗ
ನಿಜವಾದ ಉದ್ದೇಶ ತಿಳಿಯುತ್ತದೆ. ಇವು ಕೇವಲ ನಾಟಕಾಂಗಗಳಲ್ಲ, ರೂ
ಕಾಂಗಗಳು. ನಾಟಕದಲ್ಲಿ 64 ಅಂಗಗಳೂ ಬರುವುದರಿಂದ ಅದು ಪರಮೋತ್ಕ
ರೂಪಕವೆಂದು ಪ್ರಸಿದ್ಧವಾಗಿದೆ. 'ಸಂಪೂರ್ಣಲಕ್ಷಣತ್ವಾಚ್ಚ'– (ದಶರೂಪ
3–2) ನಾಟಕದಲ್ಲಿ ಎಲ್ಲಾ ಅಂಗಗಳನ್ನು ತರುವ ಸಾಧ್ಯತೆ ಇದೆ ಎಂ
ಮಾತಿನಿಂದ ಇದು ತಿಳಿದುಬರುತ್ತದೆ. ಆದರೆ ಎಲ್ಲಾ ಅಂಗಗಳನ್ನೂ ತರಲೆ
ಬೇಕೆಂಬ ನಿಯಮವಿಲ್ಲ. ಕೆಲವು ರೂಪಕಗಳಲ್ಲಿ ಕೆಲವು ಅಂಗಗಳು ನಿಷಿದ್ಧ
ವಾಗಿವೆ.

೪ ಪರಂಪರಾಗತವಾದ ಲಕ್ಷಣಗ್ರಂಥಗಳನ್ನು ಗಮನಿಸಿದಾಗ ಏಕರೂಪ
ಯಿಂದ, ನಿರಂತರವಾಗಿ, ಹೊಂದಾಣಿಕೆಯಿಂದ ನಾಟಕದ ಬೆಳವಣಿಗೆಗೆ ಸಂಧಿ
ಸಂಧ್ಯಂಗಗಳು ಅತ್ಯಾವಶ್ಯಕವೆಂದು ಕಂಡುಬರುತ್ತದೆ. ಸಂವಿಧಾನವು ನಾಟಕದ
ಶರೀರ. ಸಂಧಿಸಂಧ್ಯಂಗಗಳು ಅಂಗಪ್ರತ್ಯಂಗಗಳು. ರಸವು ಆತ್ಮ. ಎಲ್ಲವೂ
ಪರಸ್ಪರಪೂರಕವಾದುವು. ಒಂದನ್ನು ಬಿಟ್ಟು ಮತ್ತೊಂದಿಲ್ಲ.

೫ ಭಾರತೀಯ ಕಾವ್ಯಮೀಮಾಂಸೆಗೆ ಇರುವಂತೆಯೇ ನಾಟ್ಯ
ಮೀಮಾಂಸೆಗೂ, ಭಾರತೀಯ ಸಂಸ್ಕೃತಿ, ಸಮಾಜ ಹಾಗೂ ವೇದಾಂತಗಳ
ಹಿನ್ನೆಲೆ ಇರುವುದನ್ನೂ ಗಮನಿಸಬೇಕು.



# ನಮ್ಮ ಪ್ರಕಟನೆಗಳು

| | | |
|---|---|---|
| 1 | ರೂಪಚಂದ್ರಿಕಾ (ಶಬ್ದರೂಪಾವಳಿ) | 1–60 |
| 2 | ದಶಕುಮಾರಚರಿತಂ (ಕಾವ್ಯಪಠ್ಯ) | 1–80 |
| 3 | ಕುಮಾರಸಂಭವ (6ನೇ ಸರ್ಗ ಅನ್ವಯಾರ್ಥಾದಿ ಸಹಿತ) (ಕಾವ್ಯಪಠ್ಯ) | 1-30 |
| 4 | ರಘುವಂಶ ಪ್ರಥಮಸರ್ಗ ಪೂರ್ತಿ (ಅನ್ವಯಾರ್ಥಾದಿ ಸಹಿತ) | 1–80 |
| 5 | ಅಮರಕೋಶ (ಪ್ರಥಮಕಾಂಡ ಕನ್ನಡಲಿಪಿ) | 0–40 |
| 6 | ಮುಕುಂದಮಾಲಾ ಸ್ತೋತ್ರ (ಅನುವಾದ ಸಹಿತ) | 0–40 |
| 7 | ದಶರೂಪಕಂ (ಸಾಹಿತ್ಯ ಪಠ್ಯಪುಸ್ತಕ) | 2–50 |
| 8 | ಸಂಸ್ಕೃತಪ್ರದೀಪಪ್ರಭಾ (ಅಚ್ಚಿನಲ್ಲಿ ಪ್ರ. 3ನೇ ತರಗತಿಯ ಪಠ್ಯಪುಸ್ತಕ ಟಿಪ್ಪಣಿ) | |
| 9 | ಭಾಷಾಂತರಪಾಠ (ಎನ್. ಆರ್. ಶರ್ಮಾ) | 0–75 |
| 10 | ತರ್ಕನವನೀತಂ (ಅನುವಾದ ಸಹಿತ ಅಚ್ಚಿನಲ್ಲಿ) | |
| 11 | ತರ್ಕಶಾಸ್ತ್ರಸಾರ ” | |
| 12 | ಈಶೋಪನಿಷತ್‌ಸಾರ ” | |
| 13 | ತಲಕಾರೋಪನಿಷತ್‌ಸಾರ ” | |
| 14 | ಧಾತುರೂಪಚಂದ್ರಿಕಾ ” | |

## ಪ್ರತಿಗಳು ಸಿಗುವ ಸ್ಥಳ

1 ಗ್ರಂಥಕರ್ತರು

2 ವೇದಾಂತಭವನ

ಅಪ್ಪೂರಾವ್ ರಸ್ತೆ, 6ನೇ ಮೆಯಿನ್ ರೋಡ್
ಚಾಮರಾಜಪೇಟೆ, ಬೆಂಗಳೂರು–18